# ಗುಣಾತ್ಮಕ ಸ್ಪರ್ಶ




## ತಿರುಮಲೆ - ತಿರುಪತಿ ದೇವಸ್ಥಾನಗಳವರು ಆರಂಭಿಸಿರುವ

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನೀ ಯೋಜನೆ

ಪ್ರಾಚೀನ ಕಾಲದಿಂದಲೂ ತಿರುಮಲೆಯ ಒಂದು ಮಹತ್ವದ ಯಾತ್ರಾಕ್ಷೇತ್ರವಾಗಿದ್ದು ಪ್ರತಿದಿನವೂ ಸಾವಿರಾರು ಮಂದಿ ಯಾತ್ರಿಕ ಭಕ್ತರು ಆಗಮಿಸಿ ಶ್ರೀ ವೆಂಕಟೇಶ್ವರಸ್ವಾಮಿಯಲ್ಲಿ ತಮ್ಮ ಐಹಿಕ ಆಧ್ಯಾತ್ಮಿಕ ಕ್ಷೇಮ ಲಾಭಗಳಿಗಾಗಿ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ

ಯಾತ್ರಿಕ ಸೇವೆಯಲ್ಲಿ ಸಮರ್ಪಿತವಾಗಿರುವ ತಿ ತಿ ದೇವಸ್ಥಾನಗಳ ಮಾನವಸೇವೆಯ ಒಂದು ಭಾಗವೇ ರೋಗ ಚಿಕಿತ್ಸೆ, ತಿ ತಿ ದೇವಸ್ಥಾನಗಳು ಈಗಾಗಲೇ ಒಂದು ಕುಷ್ಠರೋಗ ನಿವಾರಣಾಕೇಂದ್ರ, ವಿಕಲಾಂಗ ಚಿಕಿತ್ಸಾ ಆಸ್ಪತ್ರೆ, ಅನಾಥಾಲಯ, ಕೇಂದ್ರ ಆಸ್ಪತ್ರೆಗಳನ್ನು ನಿರ್ವಹಿಸುತ್ತಿವೆ ಅಗತ್ಯವಿರುವ ಬಡ ರೋಗಿಗಳ ಸೇವೆಗೆಂದು ದೆಹಲಿ, ಪಾಂಡಿಚೇರಿ, ಚಂದಿಗಢಗಳಲ್ಲಿರುವಂತೆ, ಅತ್ಯಾಧುನಿಕ ಯಂತ್ರೋಪಕರಣಗಳಿಂದ ಕೂಡಿದ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ - ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ (ಸ್ವಿಮ್ಸ್) ಅನ್ನು ಸ್ವಾಮಿಯ ಆಶೀರ್ವಾದದೊಡನೆ ಆರಂಭಿಸಲಾಗಿದೆ ಇಲ್ಲಿ ವೈದ್ಯಕೀಯ ವಿಜ್ಞಾನದ ಸೇವೆ, ತರಬೇತಿ, ಶಿಕ್ಷಣಗಳನ್ನು ನೀಡುವುದೇ ಅಲ್ಲದೆ, ಸಂಶೋಧನೆ, ಅಭಿವೃದ್ಧಿಗಳನ್ನೂ ಸಾಧಿಸಲು ಅವಕಾಶ ಮಾಡಲಾಗಿದೆ

ಇಂತಹ ಅತ್ಯಾಧುನಿಕ ಯಂತ್ರೋಪಕರಣಗಳ ಆಸ್ಪತ್ರೆಯ ಅನುಕೂಲಗಳು ನಮ್ಮ ಎಲ್ಲ ಸಹೋದರರಿಗೂ ಸಿಗುವಂತಾಗಬೇಕು

ಈ ಘನ ಉದ್ದೇಶದಿಂದ ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನೀ ಯೋಜನೆಯನ್ನು ಆರಂಭಿಸಲಾಗಿದೆ ಇದರಿಂದಾಗಿ ಅಗತ್ಯವಿರುವ ಎಲ್ಲರಿಗೂ ಅನುಕೂಲಕರವಾದ ದರಗಳಲ್ಲಿ ಅತ್ಯಾಧುನಿಕ ಸೌಕರ್ಯಗಳ ಚಿಕಿತ್ಸಾ ಸೌಲಭ್ಯ ದೊರೆಯುವಂತೆ ಆಗುವುದು ಈ ಯೋಜನೆಯ ವಿವರಗಳನ್ನು ಕೆಳಗೆ ನೀಡಲಾಗಿದೆ ದಾನಿಗಳು ಉದಾರ ಹೃದಯದಿಂದ ದಾನ ನೀಡಬೇಕೆಂದು ಆಹ್ವಾನಿಸುತ್ತೇವೆ

**ಯೋಜನೆಯ ವಿವರ**

* ಸ್ವಿಮ್ಸ್‌ಗೆ ನೀಡುವ ಎಲ್ಲ ದಾನಗಳೂ 80 (ಜಿ) ಕಲಮಿನಂತೆ 100 ಶತಾಂಶ ಆದಾಯಕರ ವಿಮುಕ್ತವಾಗಿರುವುದು
* ದಾನಗಳನ್ನು ಯಾರುಬೇಕಾದರೂ - ವ್ಯಕ್ತಿ, ಕುಟುಂಬ, ಸಂಘ, ಸಂಸ್ಥೆಗಳು - ಮಾಡಬಹುದು
* ಒಂದು ಲಕ್ಷ ರೂಪಾಯಿ ಹಾಗೂ ಹೆಚ್ಚಿನ ಹಣ ನೀಡಿದವರ ಹೆಸರುಗಳನ್ನು ಆಸ್ಪತ್ರೆಯ ಸ್ವಾಗತ ಕಚೇರಿಯಲ್ಲಿ ಪ್ರಕಟಿಸಲಾಗುವುದು
* ಐದು ಲಕ್ಷ ಮತ್ತು ಹೆಚ್ಚಿನ ಹಣ ದಾನ ಮಾಡಿದವರ ಹೆಸರುಗಳನ್ನು ಕೋಣೆಗಳಿಗಿಡಲಾಗುವುದು
* ಒಂದು ಉಪವಿಭಾಗಕ್ಕೆ 15 ಲಕ್ಷ ರೂಪಾಯಿಗಳಿಗಿಂತ ಹೆಚ್ಚು ದಾನ ನೀಡಿದವರ ಹೆಸರನ್ನಿಡಬಹುದು
* 15 ಲಕ್ಷ ರೂ ಗಳಿಗೂ ಹೆಚ್ಚಿನ ದಾನ ನೀಡುವವರ ಹೆಸರಿನಲ್ಲಿ ಒಂದು ಘಟಕವನ್ನೂ ಹೆಸರಿಸಬಹುದು
* ಒಂದು ಸ್ನಾತಕೋತ್ತರ ಶಿಕ್ಷಣ ವಿದ್ಯಾರ್ಥಿನಿಲಯ, ಶಸ್ತ್ರಚಿಕಿತ್ಸಾ ಕೋಣೆ, ನರ್ಸ್‌ಗಳ ವಸತಿ ಗೃಹ, ರೋಗಿಗಳ ನೆರವಿಗರ ಸತ್ರಗಳಲ್ಲಿ ಒಂದಕ್ಕೆ - ಒಂದು ಕೋಟಿ ರೂಪಾಯಿ ನೀಡುವವರ ಹೆಸರನ್ನಿಡಬಹುದು
* ಐದು ಲಕ್ಷ ರೂಪಾಯಿಗಳ ದಾನದ ಮೂಲಕ ವರ್ಷದಲ್ಲಿ ಒಂದು ಪ್ರಮುಖ ಶಸ್ತ್ರ ಚಿಕಿತ್ಸೆಯನ್ನು ಆಗಮಾಡಿಸಬಹುದು
* ಪೂರ್ಣವಾಗಿ ಸಂಶೋಧನೆಯ ಉದ್ದೇಶದ ಪೀಠಗಳನ್ನು ಹತ್ತು ಲಕ್ಷ ರೂಪಾಯಿ ದಾನಗಳಿಂದ ಸ್ಥಾಪಿಸಬಹುದು

**ಐದು ಲಕ್ಷ - ಮತ್ತು ಹೆಚ್ಚಿನ ದಾನ ನೀಡುವವರಿಗೆ ತಿರುಮಲೆಯಲ್ಲಿ ಕಲ್ಪಿಸುವ ಸೌಲಭ್ಯಗಳು**

* ಸ್ವಾಮಿಯ ಓಲಗದಲ್ಲಿ ಆವರ್ತನ ಪದ್ಧತಿಯಲ್ಲಿ ದಾನಿಯ ಹೆಸರನ್ನು ಹೇಳಲಾಗುವುದು
* ವರ್ಷದಲ್ಲಿ ಮೂರುದಿನಗಳು ದಾನಿಯ ಕುಟುಂಬದ ಐವರಿಗೆ ಬಿಡುವಿನ ಸಮಯದಲ್ಲಿ ಆರತಿ ಸಮೇತ ಸ್ವಾಮಿ ದರ್ಶನದ ಏರ್ಪಾಡು
* ವರ್ಷದಲ್ಲಿ ಮೂರು ದಿನಗಳ ಕಾಲ ದಾನಿಯ ಕುಟುಂಬದ ಐವರಿಗ ಅತಿಗಣ್ಯ ವ್ಯಕ್ತಿಗಳ ವಸತಿಯನ್ನು ಉಚಿತವಾಗಿ ನೀಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬಂಗಾರದ ಚಿತ್ರದ ಜ್ಞಾಪಿಕೆಯನ್ನು ದಾನಿಗ ನೀಡಲಾಗುವುದು
* ದಾನಿಗಳು ಆಸ್ಪತ್ರೆಗೆ ಬೇಕಾದ ಉಪಕರಣಗಳು, ವಾಹನಗಳು, ದಾನ ನೀಡಬಹುದು ಅಪೇಕ್ಷಿಸಿದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿನ ಆರೋಗ್ಯ ತಪಾಸಣಾ ಶಿಬಿರಗಳನ್ನು ನಡೆಸಲು ಮುಂದೆ ಬರಬಹುದು

ಮಿಕ್ಕ ವಿವರಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ-

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ



ನಾರಾಯಣ ತೇ ನಮೋ ನಮೋ ಭವ
ನಾರದ ಸನ್ನುತ ನಮೋ ನಮೋ ||ಪ||

ಮುರಹರ ನಗಧರ ಮುಕುಂದ ಮಾಧವ
ಗರುಡಗಮನ ಪಂಕಜ ನಾಭ
ಪರಮಪುರುಷ ಭವ ಭಂಜನ ಕೇಶವ
ನರ ಮೃಗ ಶರೀರ ನಮೋ ನಮೋ ||೧||

ಜಲಧಿ ಶಯನ ರವಿಚಂದ್ರ ವಿಲೋಚನ
ಜಲರುಹ ಭವನುತ ಚರಣ ಯುಗ
ಬಲಿಭಂಜನ ಗೋವರ್ಧನ ವಲ್ಲಭ
ನಳಿನೋದರ ತೇ ನಮೋ ನಮೋ ||೨||

ಆದಿದೇವ ಸಕಲಾಗಮ ಪೂಜಿತ
ಯಾದವಕುಲ ಮೋಹನರೂಪ
ವೇದೋದ್ಧರ ಶ್ರೀ ವೆಂಕಟನಾಯಕ ಪು
ರಂದರ ವಿಠಲ ತೇ ನಮೋ ನಮೋ ||೩||

- ಪುರಂದರದಾಸರು.

ಸಂದರ್ಶಿಸಿ ಆರಾಧಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

# ತಿರುಮಲೆ



# ನವರಾತ್ರಿ ಬ್ರಹ್ಮೋತ್ಸವಗಳು

## 10-10-99 ರಿಂದ 19-10-99 ವರೆಗೆ

ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 10-10-99 | ಭಾನುವಾರ | | ಸೇನಾಪತಿ ಉತ್ಸವ, ಅಂಕುರಾರ್ಪಣೆ |
| 11-10-99 | ಸೋಮವಾರ | ತಿರುಚ್ಚಿ ಉತ್ಸವ | ದೊಡ್ಡಶೇಷವಾಹನ |
| 12-10-99 | ಮಂಗಳವಾರ | ಚಿಕ್ಕಶೇಷವಾಹನ | ಹಂಸವಾಹನ |
| 13-10-99 | ಬುಧವಾರ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 14-10-99 | ಗುರುವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 15-10-99 | ಶುಕ್ರವಾರ | ಮೋಹಿನೀ ಅವತಾರ | ಗರುಡವಾಹನ |
| 16-10-99 | ಶನಿವಾರ | ಹನುಮಂತವಾಹನ<br>ಸಂಜೆ ಸುವರ್ಣರಥ<br>ವಸಂತೋತ್ಸವ | ಗಜವಾಹನ |
| 17-10-99 | ಭಾನುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 18-10-99 | ಸೋಮವಾರ | (ರಜತ)ರಥೋತ್ಸವ | ಅಶ್ವವಾಹನ |
| 19-10-99 | ಮಂಗಳವಾರ | ಚಕ್ರಸ್ನಾನ | ತಿರುಚ್ಚಿವಾಹನ |

ಸೂಚನೆ ದಿನವೂ ಬೆಳಗಿನಿಂದ ರಾತ್ರಿಯವರೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳುಂಟು ಧರ್ಮಗ್ರಂಥಗಳ ಮಾರಾಟವುಂಟು

**ನೀವೂ ಬನ್ನಿ** **ತಿ.ತಿ.ದೇ.** **ನಿಮ್ಮವರನ್ನೂ ಕರೆತನ್ನಿ**




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ 30 ಅಕ್ಟೋಬರ್ 1999 ಸಂಚಿಕೆ - 5



ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ.ದೇ
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**



## ವಿಷಯಸೂಚಿ



ಮುಖಚಿತ್ರ ಶ್ರೀ ವೇಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ದೃಶ್ಯಗಳು

ಹಿಂಬದಿಯಲ್ಲಿ ದುರ್ಗಾದೇವಿ - ಚಿತ್ರ - ಡಾ॥ ಕೆ ಜಗದೀಶ್




ಕಲಿಯುಗದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಅದ್ವಿತೆಯನ್ನು ಮುಖ್ಯ ಮಾಡಿಕೊಂಡು ಹೇಳಿದ ಮಾತು - ಕಲೌ ವೇಂಕಟನಾಯಕಃ ಇಲ್ಲಿ ಯುಗಗಳ ಮಾತು ಆಡಲಾಗಿದೆ ತ್ರೇತೆಯಲ್ಲಿ ರಾಮಚಂದ್ರನೆಂದೂ, ದ್ವಾಪರದಲ್ಲಿ ಕೃಷ್ಣನೆಂದೂ ಹೇಳಲಾಗಿದೆ ಭಗವಂತ ಒಂದೊಂದು ಯುಗದಲ್ಲಿ ಒಂದೊಂದು ರೀತಿಯಲ್ಲಿ ಕಾಣಿಸಿಕೊಂಡ, ಅಲ್ಲಿಗಲ್ಲಿಗೆ ನ್ಯಾಯವನ್ನುಂಟುಮಾಡುತ್ತ, ಧರ್ಮಗ್ಲಾನಿ ಉಂಟಾದಾಗ ಕಾಣಿಸಿಕೊಂಡದ್ದು ಎಂಬುದೇ ಮೂಲ ಸೂತ್ರವಾದರೂ, ಕಲಿಯಲ್ಲಿ ಸರ್ವತ್ರವಾದ ಧರ್ಮಾವನತಿಯನ್ನು ದೂರಗೊಳಿಸಿ, ಆತ್ಮ ಲೀಲೆಗೆ ಒಂದು ಸಮತಟ್ಟು ನೆಲವನ್ನು ಒದಗಿಸಿ, ಸಾಮಾಜಿಕ ಧಾರ್ಮಿಕ ಸ್ತರವನ್ನು ಮೇಲೇರಿಸಲು ವೆಂಕಟನಗದಲ್ಲಿ ನೆಲೆನಿಂತ

ಬೆಟ್ಟದೊಡೆಯನನ್ನು ಬೇರೆ ಬೇರೆ ರೂಪಗಳಲ್ಲಿ ಕಂಡವರುಂಟು ಪುರಂದರ ದಾಸರಿಗೆ ಆತ ವೆಂಕಟ ವಿಠಲನಾಗಿ ಕಂಡು ಬಂದರೆ ಅನ್ನಮಾಚಾರ್ಯರಿಗೆ ಅಲ್ಲಿಯೇ ದಶಾವತಾರವೂ ಕಂಡುಬರುತ್ತದೆ ಯಾರು ಯಾರು ಎಷ್ಟೆಷ್ಟರ ಮಟ್ಟಿಗೆ ನೋಡುವರೊ ಅಷ್ಟು ಮಾತ್ರವಾಗಿ ನೀನೇ ಕಂಡು ಬರುವ ಎಂಬುದು ಅನ್ನಮಯ್ಯ ಕಂಡುಕೊಂಡ ಸತ್ಯ ಇದು ಭಗವಂತ ಗೀತೆಯಲ್ಲಿ ಹೇಳಿದ 'ಯಾರು ಯಾರು ಯಾವ ಯಾವ ರೂಪದಲ್ಲಿ ನನ್ನನ್ನು ಅರ್ಚಿಸುವರೋ ಅವರವರಿಗೆ ಆಯಾ ರೂಪದಲ್ಲಿ ಕಂಡುಬರು'ವೆನೆಂಬ ಮಾತಿಗೆ ಸಂವಾದಿಯಾಗಿದೆಯಷ್ಟೆ, ಕನ್ನಡದಲ್ಲಿಯೂ ಅವರವರ ಭಾವಕ್ಕೆ ಅವರವರ ವೇಷಕ್ಕೆ ಅವರವರಿಗೆಲ್ಲ ಗುರು ನೀನೊಬ್ಬನೇ ಎಂಬ ಹಿರಿದಾದ ತತ್ವವನ್ನು ಬಿತ್ತರಿಸುವ ಭಕ್ತ ವಚನವುಂಟು

ಈ ಎಲ್ಲ ರೂಪಗಳಲ್ಲಿ ಕಾಣಿಸುವ ಆ ಮಹಾಸತ್ವ ಒಂದೇ ಎಂಬುದನ್ನು ನಿಜಜೀವನದಲ್ಲಿ ಎರಡೆರಡು ಹೆಸರುಗಳ ಜೋಡಿಕೆಯಿಂದಲೂ ಸಾಧಾರಣವಾಗಿ ಗುರುತಿಸಬಹುದು ಹರಿನಾರಾಯಣ ಎಂದಂತೆಯೇ ವೆಂಕಟಕೃಷ್ಣ, ವೆಂಕಟರಾಮ, ವೆಂಕಟ ನರಸಿಂಹ - ಎಂದೂ ಕರೆದು ವೆಂಕಟೇಶ್ವರಸ್ವಾಮಿಯಲ್ಲಿ ಎಲ್ಲಾ ಅವತಾರಗಳನ್ನು ಸಮೀಕರಿಸಲಾಯಿತು ವೆಂಕಟ ಲಕ್ಷ್ಮಿ ಎನ್ನುತ್ತ ನಿತ್ಯಾನಪಾಯಿನಿಯಾದ ಲಕ್ಷ್ಮಿಯನ್ನೂ ಜೋಡಿಸಿ ಜೊತೆಯಾಗಿ ಕರೆದಂತೆ ಮಾಡಿದರು

ನವರಾತ್ರಿ ಉತ್ಸವಗಳು ಮುಂದೆ ಬರುತ್ತಿವೆ ನವರಾತ್ರಿಗಳಲ್ಲಿ ದೇವಿಯನ್ನು ವಿವಿಧ ರೂಪಗಳಲ್ಲಿ - ತ್ರಿಮೂರ್ತಿ ಸ್ವರೂಪದಲ್ಲಿ - ಲಕ್ಷ್ಮಿ ಸರಸ್ವತಿ ಪಾರ್ವತಿಯರ ರೂಪದಲ್ಲಿ - ಆರಾಧಿಸಲು ಸಕಾಲವೆಂದು ಘೋಷಿಸಲಾಗಿದೆ ಮಳೆಕಳೆದು ಬೆಳೆಬರುವ ಹೊತ್ತು ಶರದದಾಕಾಶದಲ್ಲಿ ಬಯಕೆಯ ಹಾರೈಕೆಯ ಪದಗಳು ತುಂಬಿವೆ ಧರೆ ತಣಿಯಲೆಂದು ಬಾಲಕರು ಹರಸುವ ದಿನಗಳು ದುರ್ಗಾ ಪೂಜೆಗೆ ಪ್ರಶಸ್ತವಾದ ಕಾಲವೆಂದು ಹೇಳಲಾಗಿದೆ ಸರಸ್ವತಿಯನ್ನು ಸಪ್ತಮಿಯಲ್ಲಿ ಆರಾಧಿಸಿ ಅಷ್ಟಮಿಯಂದು ದುರ್ಗೆಯನ್ನು ನಮಿಸುತ್ತ ದಶಮಿಯಂದು ವಿಜಯೋತ್ಸವವನ್ನಾಚರಿಸಬೇಕು ಸೀಮೋಲ್ಲಂಘನ ಆಗಬೇಕು ಜೈತ್ರಯಾತ್ರೆಯ ಪ್ರತೀಕವಾಗಿಯೇ ಪ್ರತಿ ಊರಿನಲ್ಲಿನ ದೇವತಾ ಉತ್ಸವ ಮೂರ್ತಿಗಳೂ ಊರಹೊರಗಿನ ಬನ್ನಿಮಂಟಪಕ್ಕೆ ಮೆರವಣಿಗೆಯಲ್ಲಿ ಬಂದು ವಿಜಯೋತ್ಸವದ ಆಚರಣೆಯಾಗುತ್ತದೆ

ತಿರುಮಲೆಯಲ್ಲಿ ಈ ವರ್ಷ ಒಂದು ವೈಶಿಷ್ಟ್ಯವುಂಟು ಅಧಿಕ ಮಾಸದ ವರ್ಷದಲ್ಲಿ ಇಲ್ಲಿ ಎರಡು ಬ್ರಹ್ಮೋತ್ಸವಗಳು ಎರಡನೆಯದು ವಿಜಯದಶಮಿಯಂದು ಬರುವ ಶ್ರವಣ ನಕ್ಷತ್ರದಲ್ಲಿ ಚಕ್ರಸ್ನಾನವಾಗುವಂತೆ ಏರ್ಪಾಡಾಗುತ್ತದೆ ಭಕ್ತರಿಗೆ ಭಗವಂತನನ್ನು ಬ್ರಹ್ಮೋತ್ಸವದಲ್ಲಿ ನೋಡಲು ಎರಡನೇ ಅವಕಾಶ, ಒಂದು ತಿಂಗಳ ಅಂತರದಲ್ಲಿಯೇ ದೊರೆಯುತ್ತದೆಯಾಗಿ ಒಮ್ಮೆ ತಪ್ಪಿತಲ್ಲ ಎಂದು ಕೊರಗದೆ ಇನ್ನೊಮ್ಮೆ ದರ್ಶಿಸಲು ಪ್ರಯತ್ನ ಪಡಬಹುದು ಮೊದಲು ನೋಡಿದವರಿಗೆ ಮತ್ತೂ ನೋಡುವ ಅವಕಾಶ ಸ್ವಾಮಿಯನ್ನು ಎಷ್ಟು ನೋಡಿದರೆ ತೃಪ್ತಿಯಾಗುತ್ತದೆ ಎಂಬುದು ಒಂದು ಪ್ರಶ್ನೆ ಇಂತಹ ಪ್ರಶ್ನೆಗೆ ಉತ್ತರವನ್ನು ಹುಡುಕುವಲ್ಲಿಯೇ ವೇದದ ನಾಲಿಗೆ ಒಣಗುತ್ತದೆ ಎಂದು ಭಕ್ತರು ಹೇಳುವುದು

ಮತ್ತೆ ಮತ್ತೆ ನೋಡಲು ಅರ್ಹನಾದ ಆ ಸ್ವಾಮಿಯನ್ನು ನೋಡಲು ಮತ್ತೆ ಮತ್ತೆ ತಿರುಮಲೆಗೆ ಬರುವುದೇ ಭಕ್ತರ ಉದ್ದೇಶವಲ್ಲವೇ ಹಾಗಾಗಿ ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ, ಸ್ವಾಮಿಸೇವೆಯಲ್ಲಿ ಲೀನರಾಗುವ

# ದೇವಿ ಆರಾಧನೆ

- ಡಾ. ಎಚ್. ವಿ. ನರಸಿಂಹಮೂರ್ತಿ.

ನಮ್ಮೆಲ್ಲರ ಮೂಲ ನಮ್ಮತಾಯಿ ಹಾಗೆಯೇ ಚರಾಚರಾತ್ಮಕವಾದ ಈ ಜಗತ್ತಿನ ಮೂಲಶಕ್ತಿಯನ್ನು 'ದೇವಿ' ಎಂದು ಆರಾಧಿಸುವುದು ಜಗತ್ತಿನ ನಾನಾ ಭಾಗಗಳಲ್ಲಿ ಬಹಳ ಹಿಂದಿನಿಂದ ನಡೆದು ಬಂದ ಪದ್ಧತಿ ನಮ್ಮ ಭಾರತದಲ್ಲಿಯೂ ಇದು ಅನಾದಿಯಿಂದ ನಡೆದು ಬಂದಿರುವ ಮತ್ತು ಈಗಲೂ ಜನಪ್ರಿಯವಾಗಿ ಜೀವಂತವಿರುವ ಒಂದು ಆರಾಧನಾ ವಿಧಾನ ಈ ಶಕ್ತಿ ದೇವತೆಯನ್ನು ಆರಾಧಿಸುವ ಪಂಥ ಶಾಕ್ತಮತವೆಂದು ಪ್ರಸಿದ್ಧಿ ಪಡೆದಿದೆ

## ಪ್ರಾಚೀನ ಗ್ರಂಥಗಳಲ್ಲಿ :

ದೇವಿಯ ಉಪಾಸನೆಯು ಕೇವಲ ತಾಂತ್ರಿಕವಲ್ಲ, ಪೌರಾಣಿಕವೂ ಅಲ್ಲ ಇದು ಋಗ್ವೇದದಷ್ಟೇ ಪುರಾತನವಾದ ಆರಾಧನಾ ವಿಧಾನ ಋಗ್ವೇದದ ಹತ್ತನೆಯ ಮಂಡಲದಲ್ಲಿ ಬರುವ ದೇವೀಸೂಕ್ತ - ರಾತ್ರೀಸೂಕ್ತಗಳು ದೇವಿಯ ಪರವಾಗಿವೆ ಅಥರ್ವಣವೇದಕ್ಕೆ ಸೇರಿದ ದೇವ್ಯಥರ್ವಶೀರ್ಷವೆಂಬ ಭಾಗವು ದೇವಿಯ ಉಪಾಸನೆಯ ವಿಧಾನವನ್ನು ವಿವರಿಸುತ್ತದೆ ಕೇನೋಪನಿಷತ್ತಿನಲ್ಲಿ ಉಮಾ ಹೈಮವತಿಯು ಇಂದ್ರನಿಗೆ ವಿದ್ಯೆಯನ್ನು ಉಪದೇಶಿಸಿದಳೆಂದು ಹೇಳಿದೆ ಮಹಾನಾರಾಯಣೋಪನಿಷತ್ತಿನಲ್ಲಿ ದೇವಿ ಉಪಾಸನೆಯ ಮಂತ್ರವಾದ ದುರ್ಗಾ ಗಾಯತ್ರಿಯನ್ನು ಕಾಣಬಹುದು ಮಹಾಭಾರತದ ವಿರಾಟಪರ್ವದ ಆರಂಭದಲ್ಲಿ ದುರ್ಗಾಸ್ತೋತ್ರವಿದೆ ಶ್ರೀಮದ್ಭಾಗವತದ ಹತ್ತನೇ ಸ್ಕಂಧದಲ್ಲಿ ಶ್ರೀಕೃಷ್ಣನ ಅವತಾರಕ್ಕೆ ಸಂಬಂಧಿಸಿದಂತೆ ದೇವಿಯ ಪಾತ್ರವನ್ನು ಕಾಣಬಹುದು ದೇವೀಭಾಗವತ ಎಂಬ ಪುರಾಣವು ಸಂಪೂರ್ಣವಾಗಿ ದೇವಿಯ ಮಹಿಮೆಯನ್ನು ತಿಳಿಸಲು ಮೀಸಲಾಗಿರುವ ಮಹಾಗ್ರಂಥ. ಮಾರ್ಕಂಡೇಯ ಪುರಾಣದಲ್ಲಿ ಬರುವ ದುರ್ಗಾಸಪ್ತಶತಿಯು ದೇವಿಯ ಅವತಾರಗಳ ಮತ್ತು ಕಾರ್ಯಗಳ ವರ್ಣನೆಯಿಂದ ಕೂಡಿದೆ ಬ್ರಹ್ಮಾಂಡ ಪುರಾಣದ ರಹಸ್ಯಕಾಂಡ ಎಂಬ ಭಾಗದಲ್ಲಿ ಹಯಗ್ರೀವ ದೇವನು ಅಗಸ್ತ್ಯಮುನಿಗೆ ಕಂಚಿ ಕ್ಷೇತ್ರದಲ್ಲಿ ಉಪದೇಶಿಸಿದ ಲಲಿತಾ ಉಪಖ್ಯಾನವು 'ಶ್ರೀವಿದ್ಯಾ' ಎಂಬ ಉಪಾಸನೆಗೆ ಆಧಾರವಾಗಿದೆ. ಪರಶುರಾಮನು ರಚಿಸಿದ ಕಲ್ಪಸೂತ್ರವೆಂಬುದು ಶಾಕ್ತಮತದ ಆಧಾರ ಗ್ರಂಥಗಳಲ್ಲಿ ಒಂದು ಶಾಕ್ತ ಮತ್ತು ಅದರ ವಿವಿಧ ಅಂಗ ಉಪಾಂಗಗಳಿಗೆ ಸಂಬಂಧಿಸಿದ ತಂತ್ರ ಮತ್ತು ಆಗಮಗಳು ಬಹುಸಂಖ್ಯೆಯಲ್ಲಿವೆ ಇವುಗಳಿಗೆ ತಂತ್ರ, ಯಾಮಳ ಮತ್ತು ಡಾಮರಗಳೆಂಬ ಪಾರಿಭಾಷಿಕ ಹೆಸರುಗಳಿವೆ

## ದೇವಿಯ ಉಪಾಸಕರು :

ಭಾರತದ ಅನೇಕ ಪ್ರಾಚೀನ ರಾಜರೂ, ಋಷಿಗಳೂ ದೇವಿಯ ಭಕ್ತರಾಗಿ ಅವಳ ಆರಾಧನೆಯಿಂದಲೇ ಸಿದ್ಧಿಯನ್ನು ಪಡೆದರೆಂದು ಶಾಕ್ತಪಂಥವು ತಿಳಿಸುತ್ತದೆ ಶ್ರೀರಾಮನು ವಿಜಯಯಾತ್ರೆಗೆ ಮುಂಚೆ ದೇವಿಯನ್ನು ಸ್ತುತಿಸಿ, ಅವಳ ಅನುಗ್ರಹ ಪಡೆದನು ಶ್ರೀಕೃಷ್ಣನು ಒಬ್ಬ ಪ್ರಚಂಡ ಶಕ್ತಿ ಪೂಜಕನೆಂದು ರಾಧಾತಂತ್ರವೆಂಬ ಗ್ರಂಥದಲ್ಲಿ ಹೇಳಿದೆ ವಶಿಷ್ಠ, ಅಗಸ್ತ್ಯ, ಲೋಪಾಮುದ್ರಾ - ಮುಂತಾದವರೆಲ್ಲ ಶಕ್ತಿಯ ಆರಾಧಕರೇ. ಶಂಕರಾಚಾರ್ಯರು 'ಸೌಂದರ್ಯಲಹರಿ' ಮತ್ತು 'ಪ್ರಪಂಚಸಾರ' - ಎಂಬ ಕೃತಿಗಳಲ್ಲಿ ಶ್ರೀದೇವಿಯ ಗುಣಗಾನ ಮಾಡಿರುವರು ಅವರು ವ್ಯವಸ್ಥೆಗೊಳಿಸಿದ ಪಂಚಾಯತನ ಪೂಜಾಪದ್ಧತಿಯಲ್ಲಿ ಶ್ರೀದೇವಿಗೆ ವಿಶಿಷ್ಟಸ್ಥಾನವಿದೆ. ಅವರು ರಚಿಸಿದರೆನ್ನಲಾಗಿರುವ ದೇವ್ಯಪರಾಧ ಕ್ಷಮಾಪಣಸ್ತೋತ್ರವು ಭಾವಬಂಧುರವಾದ ಮತ್ತು ಮನಸ್ಸನ್ನು ಕರಗಿಸಿ, ನೀರಾಗಿ ಹರಿಸುವ ದಿವ್ಯ ಕೃತಿ ಭಾಸುರಾನಂದನಾದರು (ಭಾಸ್ಕರ ರಾಯ) ಲಲಿತಾ ಸಹಸ್ರನಾಮದ ಅರ್ಥ ತಿಳಿಸುವ ಭಾಷ್ಯವನ್ನು ಮತ್ತು ಇನ್ನೂ ಇತರ ಮಹತ್ವದ ಕೃತಿಗಳನ್ನು ರಚಿಸಿರುವರು ಲಕ್ಷ್ಮಣ ದೇಶಿಕೇಂದ್ರರು 'ಶಾಕ್ತಾನಂದ ತರಂಗಿಣಿ'ಯನ್ನು ರಚಿಸಿರುವರು ಇವೆಲ್ಲ ಶಾಕ್ತಪಂಥದ ಪ್ರಮಾಣಗ್ರಂಥಗಳು



ಕರ್ನಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಇಬ್ಬರಾದ ಶ್ಯಾಮಶಾಸ್ತ್ರಿ ಮತ್ತು ಮುತ್ತುಸ್ವಾಮಿ ದೀಕ್ಷಿತರು ಶ್ರೀ ವಿದ್ಯಾ ಉಪಾಸಕರಾಗಿದ್ದು, ಹಾಡುವವರ ಮತ್ತು ಕೇಳುವವರ ಹಿತಕ್ಕಾಗಿ ಅನೇಕ ಸಂಗೀತ ಕೃತಿಗಳನ್ನು ರಚಿಸಿದ್ದಾರೆ ಬಂಗಾಳದ ಜನಪ್ರಿಯ ಶಾಕ್ತಕವಿಗಳಾದ ರಾಮಪ್ರಸಾದ ಮತ್ತು ಕಮಲಾಕಾಂತರೂ ಭಾವಗರ್ಭಿತವಾದ ಗೀತೆಗಳನ್ನು ರಚಿಸಿದ್ದಾರೆ ರಾಮಕೃಷ್ಣ ಪರಮಹಂಸರು ನಮ್ಮ ಕಾಲದ ಒಬ್ಬ ಹಿರಿಯ ದೇವೀ ಉಪಾಸಕರು ಇವರು ದಕ್ಷಿಣೇಶ್ವರದಲ್ಲಿ ಕಾಳಿಕಾ ದೇವಾಲಯದ ಅರ್ಚಕರಾಗಿದ್ದು, ತಂತ್ರಸಾಧನೆ ಮಾಡಿ ಸಿದ್ಧಿ ಪಡೆದವರು ಇವರು ಶಾಕ್ತಗೀತೆಗಳನ್ನು ತಾವೇ ಹಾಡುತ್ತಾ, ಭಕ್ತರಿಂದ ಹಾಡಿಸಿ ಕೇಳುತ್ತಾ ಭಾವಸಮಾಧಿ ಹೊಂದುತ್ತಿದ್ದರು

## ದೇವಿ ಕ್ಷೇತ್ರಗಳು :

ಕಂಚಿಯ ಕಾಮಾಕ್ಷಿ, ಕಾಶಿಯ ವಿಶಾಲಾಕ್ಷಿ, ಮಧುರೆಯ ಮೀನಾಕ್ಷಿ - ಈ ಹೆಸರುಗಳನ್ನು ಯಾರು ತಾನೇ ಕೇಳಿಲ್ಲ? ಹಾಗೆಯೇ ಕಾಶ್ಮೀರದ ಕ್ಷೀರ ಭವಾನಿ, ಮಧ್ಯಪ್ರದೇಶದ ವಿಂಧ್ಯವಾಸಿನೀ, ಅಸ್ಸಾಮಿನ ಕಾಮಾಖ್ಯ ದೇವೀ, ಕಲ್ಕತ್ತೆಯ ಕಾಳೀ, ವಿಜಯವಾಡದ ನವದುರ್ಗಾ, ಮಹಾರಾಷ್ಟ್ರದ ತುಳಜಾಭವಾನೀ, ಕೊಲ್ಹಾಪುರದ ಮಹಾಲಕ್ಷ್ಮೀ, ದಕ್ಷಿಣದ ತುದಿಯ ಕಡಲತಡಿಯಲ್ಲಿ ನಿಂತಿರುವ ಕನ್ಯಾಕುಮಾರೀ - ಇವು ನಮ್ಮ ದೇಶದ ಪ್ರಸಿದ್ಧ ದೇವೀ ಕ್ಷೇತ್ರಗಳು

ಶಾಕ್ತಪಂಥದ ಪ್ರಕಾರ ನಮ್ಮ ಸಮಗ್ರ ಭರತ ಭೂಮಿಯೇ ಒಂದು ವಿಶಾಲವಾದ ಶಾಕ್ತಕ್ಷೇತ್ರ ಇಲ್ಲಿ ಒಂದು ಮೂಲೆಯಿಂದ ಮತ್ತೊಂದು ಮೂಲೆಯವರೆಗೆ ಐವತ್ತೆರಡು ಶಕ್ತಿಪೀಠಗಳಿವೆ ನಮ್ಮ ಕರ್ನಾಟಕವು ದೇವಿಗೆ ಅತಿಪ್ರಿಯವಾದ ನೆಲೆವೀಡು ಬಿಜಾಪುರದ ಬನಶಂಕರೀ, ಮೈಸೂರಿನ ಚಾಮುಂಡೀ, ಶೃಂಗೇರಿಯ ಶಾರದೆ, ಕೊಲ್ಲೂರಿನ ಮೂಕಾಂಬಿಕೆ, ಹೊರನಾಡಿನ ಅನ್ನಪೂರ್ಣೇಶ್ವರೀ - ಹೀಗೆ ಒಂದೆ, ಎರಡೆ, ಹತ್ತು ಹಲವುರೂಪಗಳಿಂದ ಆ ಮಹಾದೇವಿ ಇಲ್ಲಿ ನೆಲೆಸಿರುವಳು

## ದಕ್ಷಿಣ ಕನ್ನಡದಲ್ಲಿ :

ದಕ್ಷಿಣ ಕನ್ನಡದಲ್ಲಿ (ಉಡುಪಿ ಜಿಲ್ಲೆಯೂ ಸೇರಿದಂತೆ) 'ದುರ್ಗಾ' ಎಂಬ ಹೆಸರಿನ ದೇವಿ ಆರಾಧನೆಗೆ ಪ್ರಾಶಸ್ತ್ಯ ಇಲ್ಲಿ ಸುಮಾರು ಮುನ್ನೂರಕ್ಕೂ ಹೆಚ್ಚು ದೇವಿ ಆಲಯಗಳಿವೆ ಅದಕ್ಕಿಂತಲೂ ಹೆಚ್ಚು ವೈದಿಕೇತರ ಆರಾಧನಾಸ್ಥಾನಗಳಿವೆ ದ್ರಾವಿಡ - ಆರ್ಯವೋ, ಬ್ರಾಹ್ಮಣ - ಬ್ರಾಹ್ಮಣೇತರವೋ, ವೈದಿಕ - ವೈದಿಕೇತರವೋ - ಅಂತೂ ಯಾವುದೋ ಒಪ್ಪವ ಹೆಸರಿನಲ್ಲಿ ಬ್ರಾಹ್ಮಣ - ಶೂದ್ರ ಎಂಬ ಜಾತಿಭೇದವಿಲ್ಲದೆ ಒಂದು ಸಾಮರಸ್ಯದ ಸ್ತರದಲ್ಲಿ ಇಲ್ಲಿ ಆರಾಧನೆ ನಡೆಯುತ್ತದೆ

'ಮಹಿಷ ಮರ್ದಿನಿ' ಹೆಸರಿನ ದುರ್ಗಾ ಆಲಯಗಳು ನಮ್ಮಲ್ಲಿ ಹೆಚ್ಚು ಎರಡು, ನಾಲ್ಕು ಎಂಟು ಭುಜಗಳನ್ನು ಹೊಂದಿ, ವಿವಿಧ ಆಯುಧ ಧಾರಿಣಿಯಾಗಿ, ಈಕೆ ಜಿಲ್ಲೆಯಾದ್ಯಂತ ಆರಾಧಿಸಲ್ಪಡುತ್ತಾಳೆ ದುಷ್ಟಶಕ್ತಿಯ ದಮನ, ಸಂಗ್ರಾಮ ವಿಜಯ, ಶತ್ರು ಮಾರಣಗಳಿಗಾಗಿ ಇಲ್ಲಿ ಆಳಿದ ಶಾತವಾಹನ, ಕದಂಬ, ಹೊಯ್ಸಳ, ಗಂಗ ಮೊದಲಾದ ರಾಜರ ಆಳ್ವಿಕೆಯಲ್ಲಿ ದುರ್ಗಾಲಯಗಳು ನಿರ್ಮಾಣಗೊಂಡವು ಪ್ರಾಯಃ ಕ್ರಿ.ಶ 4 - 5 ನೆಯ ಶತಮಾನದಿಂದ ಇಲ್ಲಿ ಶಕ್ತಿ ಆಲಯಗಳಿದ್ದು, ಆರಾಧನೆ ನಡೆಯುತ್ತಿದೆ ಶಾಸನಗಳ ಆಧಾರದಿಂದ ದೆಳ್ಳಣ್ಣೆ ದುರ್ಗಾ (ಲಿಂಗ ರೂಪದಲ್ಲಿ) ಸುಮಾರು ಏಳನೇ ಶತಮಾನದ್ದೆಂದು ಡಾ|| ಗುರುರಾಜಭಟ್ಟರು ನಿರ್ಣಯಿಸಿದ್ದಾರೆ ಪುತ್ತೂರು - ಕುಂಜೂರಿನ ಮತ್ತು ಹೆಲಿಯಾಣದ ಮಹಿಷಮರ್ದಿನಿ ವಿಗ್ರಹ ಶಿಲ್ಪವನ್ನು ಪರಿಶೀಲಿಸಿದರೆ ಈ ನಾಡಿನಲ್ಲಿ ನಾಲ್ಕು ಅಥವಾ



ಐದನೆಯ ಶತಮಾನದಷ್ಟು ಹಿಂದೆಯೇ ದುರ್ಗಾರಾಧನೆ ಪ್ರಚಲಿತವಿದ್ದಿರಬೇಕೆಂದು ಕಾಣುತ್ತದೆ

ವಿವಿಧ ದುರ್ಗಾ ಪ್ರಭೇದಗಳನ್ನು ಪರಿಶೀಲಿಸಿದರೆ ಈ ಜಿಲ್ಲೆಯಲ್ಲಿ ವಿರಳವಾಗಿ ಚಂಡಿಕಾ, ಕಾತ್ಯಾಯನಿ, ನವದುರ್ಗೆಯರು, ಭ್ರಾಮರಿ, ರಾಜರಾಜೇಶ್ವರಿ, ಚಾಮುಂಡಾ, ಭದ್ರಕಾಳಿ, ಸ್ಕಂಧಮಾತೆಯರೆಂದು ಕರೆಯಲ್ಪಡುವ ಶಕ್ತಿದೇವಿಯರಿದ್ದಾರೆ ಭದ್ರಕಾಳಿ, ಚಾಮುಂಡಾ, ಧೂಮವತಿ - ಮೊದಲಾದ ಆರ್ಯ ದೇವಿಯರು ಆರ್ಯೇತರವಾದ, ಭೂತವರ್ಗದಲ್ಲಿ ಸೇರಿರುತ್ತವೆ ಹಾಗೆಯೇ ಕೊಲ್ಲೂರಮ್ಮ ಕಾಳರಾತ್ರಿ, ಸತ್ಯದೇವತೆ, ಲೆಕ್ಕೆಸಿರಿ (ರಕ್ತೇಶ್ವರಿ) - ಇವೆಲ್ಲ ಭೂತವರ್ಗದಲ್ಲಿ ಕಂಡುಬರುತ್ತವೆ. ಶಕ್ತಿವಾದವು ಪ್ರಾಚೀನ ಕಾಲದಿಂದಲೂ ಮೂಲನಿವಾಸಿಗಳ ಆರಾಧನೆಯನ್ನು ಬಳಸಿಕೊಂಡಿತು ಅರಣ್ಯವಾಸಿಗಳಾದ ಶಬರ, ಕಿರಾತರು ಆಸುರೀತ್ರಯೆಯಿಂದ ಪ್ರಾಣಿಬಲಿ, ನರಬಲಿಗಳಿಂದ ಆರಾಧಿಸುತ್ತಿದ್ದ 'ಅಮ್ಮನವರು' ಕಾಲಕ್ರಮದಲ್ಲಿ ದುರ್ಗಾ ಎಂಬ ಶಕ್ತಿಯ ಆವಿರ್ಭಾವಕ್ಕೆ ಕಾರಣವಾಯಿತೆಂದು ನಂಬಲಾಗಿದೆ ಹರಿವಂಶದ ಆರ್ಯಾಸ್ತವದಲ್ಲಿ 'ಸುರಾಮಾಂಸ ಬಲಿಪ್ರಿಯಾ' ಎಂದು ಸ್ತುತಿಸಲ್ಪಡುವ ವಿಂಧ್ಯಾವಾಸಿನಿಯು ದೇವಿಭಾಗವತದ ಕಾಲಕ್ಕಾಗುವಾಗ ಶೈವ, ಶಾಕ್ತ, ವೈಷ್ಣವ ಪಂಥಗಳು ಮನ್ನಿಸುವ ಮಹಾನ್ ಶಕ್ತಿದೇವತೆಯಾಗಿ ಮಾರ್ಪಟ್ಟಳೆಂದು ಹಲವು ವಿದ್ವಾಂಸರು ಅ[illegible]ದ್ದಾರೆ ನಮ್ಮಲ್ಲಿ 'ದುರ್ಗಾಪರಮೇಶ್ವರೀ' ಅಭಿಧಾನವೇ ಸರ್ವತ್ರ ಜನಪ್ರಿಯವಾಗಿದೆ

ಉಡುಪಿಯ ಸುತ್ತಮುತ್ತ ರಕ್ಷಕ ಶಕ್ತಿಗಳಾಗಿ ಕಡಿಯಾಳಿ, ಕುಂಜಾರುಗಿರಿ, ದೈಲೂರು, ಕುಂಜೂರು - ಮೊದಲಾದ ಹಲವಾರು ಶಕ್ತಿಸ್ಥಾನಗಳಿವೆ ಕೊಲ್ಲೂರು, ಕಟೀಲು ಮತ್ತು ಪೊಳಲಿ ಕ್ಷೇತ್ರಗಳು ಜಾಗೃತ ಶಕ್ತಿಸ್ಥಾನಗಳೆನಿಸಿವೆ ಶಿವಶಕ್ತಿ ಸಂಕೇತದ ಉದ್ಭವಲಿಂಗ, ಪರ್ವತ ದೇವಿಯಾದ ಮೂಕಾಂಬಿಕಾ ಎನಿಸಿ ಇಂದಿಗೂ ಶಂಕರ ಭಗವತ್ಪಾದರು ನಿರ್ದೇಶಿಸಿದ ರೀತಿಯಲ್ಲೇ ಪೂಜಿಸಲ್ಪಡುತ್ತಿರುವ ಕೊಲ್ಲೂರು ದೇವಿ ಮಹಾನ್ ಶಕ್ತಿ ಎನಿಸಿದ್ದಾಳೆ ಕಾತ್ಯಾಯನಿ, ಪ್ರಧಾನ ದೇವತೆಯಾಗಿದ್ದು, ನವದುರ್ಗೆಯರು, ಚಾಮುಂಡಾ, ನಾಗ - ಭೂತಗಣಗಳು ಮತ್ತು ಸುಬ್ರಹ್ಮಣ್ಯಸ್ಥಾನವಿರುವ, ಆಗಮೋಕ್ತವಲ್ಲದ ಶಕ್ತಿಸಂಕೀರ್ಣವು ಮಂದರ್ತಿ ಕ್ಷೇತ್ರ ಕಲ್ಪೋಕ್ತ ಆರಾಧನೆ, ನವರಾತ್ರಿಯಲ್ಲಿ ಗೆಂಡ, ನಾಗದರ್ಶನ, ಢಕ್ಕೆಬಲಿ - ಎಂಬ ಸುಬ್ರಹ್ಮಣ್ಯ ಮತ್ತು ದೇವಿ - ಈ ಮೂರನ್ನೂ ಅಭೇದ ಭಾವದಿಂದ ಒಂದರೊಡನೊಂದನ್ನು ಸಮೀಕರಿಸಿ ಸ್ಥಾಪಿತವಾದ ಇಂದ ದೈವ ಸಂಕೀರ್ಣಗಳು ಜಾನಪದ ಜೀವನದ ಸರ್ವದೇವತಾರಾಧನೆಯ ಮಾದರಿಯಾಗಿವೆ

ದಕ್ಷಿಣ ಕನ್ನಡದ ವಿಶೇಷವೆಂದರೆ ವಿಶ್ವಕರ್ಮ ಸಮಾಜವು ಆರಾಧಿಸುವ ಕಾಳಿಕಾದೇವಿ, ಜೈನರ ಕೂಷ್ಮಾಂಡಿನಿ, ಪದ್ಮಾವತಿ, ಜ್ವಾಲಾಮಾಲಿನಿ ಮೊದಲಾದ ದೇವಿಯರೆಲ್ಲ ಶಕ್ತಿ ದೇವತೆಗಳೇ ಆಗಿದ್ದಾರೆ ಇವರಿಗೆಲ್ಲ ಸೌಮ್ಯ ಸಾತ್ವಿಕ ವಿಧಾನದ ಪೂಜೆಯೇ ಸಲ್ಲುತ್ತದೆ

ಪರಬ್ರಹ್ಮ ಚೈತನ್ಯ ಸ್ವರೂಪಿಣಿಯಾಗಿ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಳಾದ ಶಕ್ತಿಯನ್ನು ಮಹಾದೇವನ ಅರ್ಧಾಂಗಿ ಶಿವಶಕ್ತಿಯೆಂದು ಶೈವರೂ, ಶ್ರೀಲಕ್ಷ್ಮಿಎಂದು ವೈಷ್ಣವರೂ, ಮಹಾಮಾತೆಯೆಂದು ಶಾಕ್ತರೂ ಪೂಜಿಸುತ್ತಾ ಬಂದಿದ್ದಾರೆ ಈ ವಿರಾಟ ಜಗನ್ನಿಯಾಮಕ ಶಕ್ತಿಯು ಅಸಂಖ್ಯ ನಾಮರೂಪಗಳಿಂದ ಇಚ್ಛಾ ಜ್ಞಾನ, ಕ್ರಿಯಾ ಮತ್ತು ಚಿಚ್ಛಕ್ತಿಯಾಗಿ ಬ್ರಹ್ಮಾಂಡದ ಕ್ರಿಯಾ ಕಲಾಪಗಳನ್ನೆಲ್ಲ ನಿಯಂತ್ರಿಸುತ್ತಾಳೆ ಇವಳನ್ನು ಪೂರ್ಣವಾಗಿ ಅರ್ಥೈಸಲಾಗದೆ ಜಿಜ್ಞಾಸುಗಳು, ಆರಾಧಕರು ನಿರಂತರವಾಗಿ ಆ ಸತ್ಯದ ಅನ್ವೇಷಣೆಯನ್ನು ನಡೆಸುತ್ತಾ ಬಂದಿರುವರು. ●

# ತಲಕಾವೇರಿ

- ಕೊಡಕ್ಕಲ್ ಶಿವಪ್ರಸಾದ್.





ಕರ್ನಾಟಕದ ಕೊಡಗು ಜಿಲ್ಲೆಯ ಕೇಂದ್ರ ಸ್ಥಳವಾದ ಮಡಿಕೇರಿಯಿಂದ ೬೦-೭೦ ಕಿ.ಮೀ ದೂರದಲ್ಲಿರುವ ತಲಕಾವೇರಿ ಕ್ಷೇತ್ರವನ್ನು ಅರಿಯದವರು ಯಾರೂ ಇಲ್ಲವೆನ್ನುವಷ್ಟು ಆ ಕ್ಷೇತ್ರದ ಮಹಿಮೆ ಅಗಾಧವಾಗಿದೆ ಬ್ರಹ್ಮಗಿರಿ ಬೆಟ್ಟದ ತಪ್ಪಲಿನಲ್ಲಿ ಜನ್ಮ ತಳೆದು ಕರ್ನಾಟಕ, ಕೇರಳ, ತಮಿಳುನಾಡು, ಪಾಂಡಿಚೇರಿ, ಮೂಲಕ ಹರಿದು ಕಾವೇರಿ ಪಟ್ಟಣಂ ಎಂಬಲ್ಲಿ ಬಂಗಾಳ ಕೊಲ್ಲಿ ಸೇರುವ ಕಾವೇರಿ ಧಾರ್ಮಿಕ, ಸಾಮಾಜಿಕ, ಆರ್ಥಿಕ ಹಾಗೂ ಐತಿಹಾಸಿಕವಾಗಿ ಮೈ ಮನಗಳನ್ನು ಪುಳಕಗೊಳಿಸುವುದನ್ನು ವರ್ಣಿಸಲಿಕ್ಕೆ ಅಸಾಧ್ಯವೆನ್ನಬಹುದು

ಧಾರ್ಮಿಕ ನೆಮ್ಮದಿ, ಹರಕೆ, ಸೇವಾಕಾರ್ಯಗಳಿಗಾಗಿ ತಲಕಾವೇರಿ ಕ್ಷೇತ್ರಕ್ಕೆ ಬರುವ ಭಕ್ತಾದಿಗಳು ತಲಕಾವೇರಿಯಿಂದ ೮ ಕಿ ಮೀ ಮೊದಲೇ ಸಿಗುವ ಭಾಗಮಂಡಲವನ್ನು ಸೇರುತ್ತಾರೆ ಇಲ್ಲಿರುವ ಭಗಂಡೇಶ್ವರ ದೇವಾಲಯದ ಎದುರು ಶ್ರೀಕಾವೇರಿ ಗುಪ್ತ ಗಾಮಿನಿಯಾಗಿ ಹರಿದು ಪವಿತ್ರವಾದ ತ್ರಿವೇಣಿ ಸಂಗಮ ವೇರ್ಪಟ್ಟಿದೆ ಕನಕ ಸು ಜ್ಯೋತಿ ನದಿಗಳು ಇಲ್ಲಿ ಕಾವೇರಿ ನದಿಯನ್ನು ಕೂಡಿಕೊಳ್ಳುವ ಕಾರಣದಿಂದ ತ್ರಿವೇಣಿ ಸಂಗಮದಲ್ಲಿ ಸ್ನಾನಗೊಳ್ಳುವವರಿಗೆ ಸಕಲ ಪಾಪ, ಅರಿಷಡ್ವರ್ಗಗಳಿಂದ ಮುಕ್ತಿ ಲಭಿಸುತ್ತದೆ ಎಂಬುದು ಪುರಾಣೋಕ್ತವಾಗಿದೆ ದಕ್ಷಿಣದ ಗಂಗೆ, ಸರ್ವಜನಕುಪಕಾರಿ, ಪಾಪಶಾಪವಿನಾಶಿನಿ, ಪರಮಪಾವನೆ, ಭಕ್ತಿ ಮುಕ್ತಿಪ್ರದಾಯಿನಿ, ದಕ್ಷಿಣಭಾರತದ ಭಾಗೀರಥಿ, ಬಲಪ್ರದಾಯಿನಿ, ಕನ್ನಡನಾಡಿನ ಸಿರಿದೇವಿ ಎಂಬುದಾಗಿ ಕೊಂಡಾಡಲ್ಪಟ್ಟಿರುವ ಕಾವೇರಿಯ ಕತೆಯು ಸ್ಕಂಧ ಪುರಾಣದಲ್ಲಿ ದೊರೆಯುತ್ತದೆ

ಕವೇರ ಮುನಿಯು ಕಠಿಣವಾದ ತಪಸ್ಸನ್ನು ಕೈಗೊಂಡು ಬ್ರಹ್ಮದೇವನ ಮಾನಸ ಪುತ್ರಿ ಲೋಪಾಮುದ್ರೆಯನ್ನು ದತ್ತು ಪುತ್ರಿಯಾಗಿ ಪಡೆಯುತ್ತಾರೆ ಕವೇರ ಮುನಿಯ ಮಗಳಾದ್ದರಿಂದ ಆಕೆಗೆ ಕಾವೇರಿ ಎಂದೇ ಹೆಸರಾಗುತ್ತದೆ ಅಗಸ್ತ್ಯ ಮಹರ್ಷಿಯನ್ನು ಕಾಲಾನಂತರ ಮದುವೆಯಾಗುತ್ತಾಳಾದರೂ, ಮದುವೆ ಸಮಯದಲ್ಲಿ ಕೊಟ್ಟ ವಾಗ್ದಾನವನ್ನು ಅಗಸ್ತ್ಯ ಮುರಿದುದನ್ನೇ ನೆಪವಾಗಿಸಿ ಕಾವೇರಿ ತನ್ನ ಮನೋಭಿಲಾಷೆಯಂತೆ ಲೋಕ ಕಲ್ಯಾಣಕ್ಕಾಗಿ ನದಿಯಾಗಿ ಹರಿಯಲಾರಂಭಿಸಿದಳೆಂದು ಕಥೆಯಲ್ಲಿ ತಿಳಿದು ಬರುತ್ತವೆ.

ಭಾಗಮಂಡಲದಲ್ಲಿರುವ ತ್ರಿವೇಣಿ ಸಂಗಮದ ತಟದಲ್ಲಿ ಅನೇಕ ಧರ್ಮಕಾರ್ಯಗಳು, ಪಿಂಡ, ತರ್ಪಣ, ಶ್ರಾದ್ಧ ಇತ್ಯಾದಿಗಳು ಅವ್ಯಾಹತವಾಗಿ ಜರುಗುತ್ತವೆ ಸಮೀಪದಲ್ಲಿರುವ ಭಗಂಡೇಶ್ವರ ದೇವಾಲಯದೊಳಗೆ ಭಗಂಡೇಶ್ವರ, ವಿಷ್ಣು, ಸುಬ್ರಹ್ಮಣ್ಯ ದೇವರ ಗುಡಿಗಳಿದ್ದು ಬಹಳ ಪುರಾತನವಾದ ಧಾರ್ಮಿಕ ನೆಮ್ಮದಿಯನ್ನು ಎತ್ತಿ ಹಿಡಿಯುವಲ್ಲಿ ಯಶಸ್ವಿಯಾದ ಭವ್ಯತೆಗಳನ್ನು ಹೊಂದಿವೆ ಭಗಂಡೇಶ್ವರ ದೇವಾಲಯದ ಪ್ರವೇಶ ದ್ವಾರದ ಪಕ್ಕ ಗಣಪತಿಯ ಗುಡಿ ಇದ್ದು ಆರಂಭದಲ್ಲಿ ಇಲ್ಲಿ ಹಣ್ಣು - ಕಾಯಿಗಳನ್ನು ಸಲ್ಲಿಸಿದ ನಂತರವೇ ಮುಂದಿನ ಸೇವಾ ಕಾರ್ಯ

ಕಾವೇರಿಯ ಉಗಮ ಸ್ಥಳವು ಅತ್ಯಂತ ದುರ್ಗಮವಾದ ಬೆಟ್ಟದ ಹಾದಿಗಳನ್ನು ಹಾದು ತಲುಪಬೇಕಾದಂತಹ ಪ್ರದೇಶದಲ್ಲಿದೆ. ಭಾಗಮಂಡಲದವರೆಗೆ ಮಡಿಕೇರಿಯಿಂದ ಬೇಕಾದಷ್ಟು ಬಸ್ಸುಗಳಿದ್ದರೂ, ಇಲ್ಲಿಂದ ತಲಕಾವೇರಿಗೆ ದಿನಕ್ಕೆ ೨ ಸಲ ಮಾತ್ರ ಬಸ್ಸು ವ್ಯವಸ್ಥೆ ಇದೆ ಉಳಿದ ಸಮಯಗಳಲ್ಲಿ ಖಾಸಗಿ ವಾಹನಗಳನ್ನು ಭಕ್ತಾದಿಗಳೇ ವ್ಯವಸ್ಥೆ ಮಾಡಿಕೊಳ್ಳಬೇಕಾದ ಸ್ಥಿತಿ ಇದೆ ತಲಕಾವೇರಿಯಲ್ಲಿ ತುಲಾ ಸಂಕ್ರಮಣದಂದು ಸೂರ್ಯನು ತುಲಾರಾಶಿಯನ್ನು ಪ್ರವೇಶಿಸುವಾಗ ನಿಗದಿತ ಸಮಯಕ್ಕೆ ಸರಿಯಾಗಿ ತಲಕಾವೇರಿಯ ಬ್ರಹ್ಮಕುಂಡಿಕೆಯಲ್ಲಿ ಹಾಲು ಉಕ್ಕುವಂತೆ





ಭಾರತದ ಚುನಾವಣಾಧಿಕಾರಿಗಳಲ್ಲಿ ಒಬ್ಬರಾದ ಜಿ.ವಿ.ಜಿ. ಕೃಷ್ಣಮೂರ್ತಿ
ಅವರು ಈಚೆಗೆ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಆರಾಧಿಸಿದರು
ಆಗ ತೆಗೆದ ಒಂದು ಚಿತ್ರವನ್ನಿಲ್ಲಿ ಸಾದರ ಪಡಿಸಲಾಗಿದೆ



ನೀರಿನ ಮಟ್ಟ ಏರತೊಡಗುತ್ತದೆ ಆಗ ಕಾವೇರಿಯ ತೀರ್ಥೋದ್ಭವ ವಾಗುತ್ತದೆ ಕಾವೇರಿ ಬ್ರಹ್ಮಕುಂಡಿಕೆಯಲ್ಲಿ ಉದ್ಭವಿಸುವ ಮೂಲಕ ತನ್ನ ಭಕ್ತರಿಗೆ ದರ್ಶನ ನೀಡುವಳೆಂಬ ನಂಬಿಕೆ ಇದ್ದು, ಈ ಸಮಯದಲ್ಲಿ ಮಳೆ, ಬಿಸಿಲು, ಕತ್ತಲೆ ಯೆನ್ನದೆ ಲಕ್ಷಾಂತರ ಭಕ್ತರು ಸಹನೆಯಿಂದ ನೆರೆದು ಜೈಕಾರ ಹಾಕುವುದನ್ನು ನೋಡುವುದೇ ಒಂದು ಆಧ್ಯಾತ್ಮಿಕ ವೈಭವೆನಿಸುತ್ತದೆ

ಸಪ್ತ ತೀರ್ಥ ಕ್ಷೇತ್ರಗಳಲ್ಲೊಂದೆನಿಸಿದ ತಲಕಾವೇರಿಯ ದಿವ್ಯ ಸನ್ನಿಧಿಯಲ್ಲಿ ಕಾವೇರಿ ತೀರ್ಥೋದ್ಭವದಂದು ಮಾತೆ ಕಾವೇರಿಯ ಆಶೀರ್ವಾದ ಪಡೆಯಲು ಆಗಮಿಸುವ ಭಕ್ತಾದಿಗಳು ತಲಕಾವೇರಿಯಲ್ಲಿ ಕಾವೇರಿ ಉಗಮ ಸ್ಥಾನದ ಮೇಲ್ಭಾಗದಲ್ಲಿರುವ ಜ್ಯೋತಿಮಂಟಪ, ಅಗಸ್ತ್ಯೇಶ್ವರ ದೇವಾಲಯಗಳನ್ನು ನೋಡಬಹುದು ಅಗಸ್ತ್ಯೇಶ್ವರ ದೇವಾಲಯದ ಎಡಭಾಗದಲ್ಲಿರುವ ಬ್ರಹ್ಮಗಿರಿ ಬೆಟ್ಟದ ಮೇಲ್ಭಾಗಕ್ಕೆ ಹೋಗಲು ೫೦೦ ಮೆಟ್ಟಿಲುಗಳನ್ನೇರಿದರೆ ಸಪ್ತರ್ಷಿಗಳು ಯಜ್ಞಮಾಡಿದರೆಂದು ಹೇಳಲಾಗುವ ಸ್ಥಳದಲ್ಲಿನ ಯಜ್ಞಕುಂಡಗಳನ್ನು ವೀಕ್ಷಿಸಬಹುದು ಸುತ್ತಲಿನ ದಟ್ಟ ಕಾಡುಗಳಿಂದಾವೃತವಾದ ಪ್ರಕೃತಿಯನ್ನು ಆಸ್ವಾದಿಸುತ್ತಾ ಧಾರ್ಮಿಕ ನೆಮ್ಮದಿಯನ್ನು ಮನಸ್ಸಿನಾಳದೊಳಗೆ ಹೆಪ್ಪುಗಟ್ಟಿಸುವ ಅದ್ಭುತವಾದ ಶಕ್ತಿ ತಲಕಾವೇರಿ ಕ್ಷೇತ್ರದಲ್ಲಿ ಸಿಗುತ್ತದೆ ಎಂಬುದು ಖಂಡಿತವಾದ ವಾಕ್ಯ

ಈ ಹಿಂದೆ, ಕಂಚಿ ಕಾಮಕೋಟಿ ಪೀಠಾಧಿಕಾರಿಗಳಾಗಿದ್ದು ಬಹು ಜನಪ್ರಿಯರಾಗಿರುವ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಮಹಾಸ್ವಾಮಿಗಳು ಇಲ್ಲಿಯ ತಾಣದಿಂದ ಆಕರ್ಷಿತರಾಗಿ ಬಹುಕಾಲ ಅಡಗಿ ಕುಳಿತುಕೊಂಡು, ತಪವನ್ನಾಚರಿಸಿದ ಕಣ್ಮರೆಯ ಸುದ್ದಿಗೆ ರೋಚಕವಾದ ಸ್ಥಳವಾಗಿರುವ ವಿಷಯ ಎಲ್ಲರಿಗೂ ತಿಳಿದಿದೆ ಅಂತಹ ಪವಿತ್ರವೂ, ಆಗಿರುವ ಕ್ಷೇತ್ರದಲ್ಲಿ ಅಭಿವೃದ್ಧಿ ಕಾರ್ಯಗಳ ಯೋಜನೆಗಳೊಂದೂ ಈವರೆಗೆ ರೂಪುಗೊಂಡಿಲ್ಲವಲ್ಲದೆ, ಪವಿತ್ರತ್ರಿವೇಣಿ ಸಂಗಮವು ಮಳೆಗಾಲದಲ್ಲಿ ಮರಳು - ಹೂಳುಗಳಿಂದ ಮುಚ್ಚಿ ಹೋಗುತ್ತಿದ್ದು, ಮಳೆಗಾಲದ ನಂತರ ಬಹಳ ಕಾಲದವರೆಗೆ ಅದೇ ಸ್ಥಿತಿ ಇರುತ್ತದೆ. ಧಾರ್ಮಿಕ ನೆಮ್ಮದಿಗಾಗಿ ಎಲ್ಲವನ್ನೂ ತಾಳಿಕೊಳ್ಳುವ ಕಾರಣದಿಂದ ಇಂತಹ ಕ್ಷೇತ್ರಗಳು ಇಂದಿಗೂ ಪ್ರಸ್ತುತವಾಗಿವೆ

# ಕನಕದಾಸರ ಶ್ರೀನಿವಾಸ

- ಪ್ರೊ|| ವಸಂತಕುಷ್ಟಗಿ.

ಕರ್ನಾಟಕದ ಹರಿದಾಸರ ಪರಂಪರೆಯಲ್ಲಿ ಶ್ರೀನಿವಾಸನಿಗೆ ವಿಶೇಷವಾದ ಸ್ಥಾನವಿದೆ ಆತನೇ ವಿಶಿಷ್ಟಾರ್ಥದಲ್ಲಿ ಸಾಮಾನ್ಯವಾಗಿ ಎಲ್ಲ ಹರಿದಾಸರಿಗೆ ಅಧಿದೈವತ ಆದರಲ್ಲಿಯೂ ಶ್ರೀನಿವಾಸನು ಜನಪರನಾಗಿರುವುದರಿಂದ ಈತನನ್ನು ಸರ್ವ ಜಾತಿ-ಮತ ಪಂಥ ಜನಾಂಗಗಳಲ್ಲಿ ಬಹುತೇಕ ಜನ ಪರದೈವವೆಂದು ನಂಬಿದ್ದಾರೆ ಅಂತೆಯೇ ಹರಿದಾಸರಿಗೆ ಅತಿ ಪ್ರಿಯವಾದ ದೈವತ ಅದೇ ರೀತಿ ಈವರೆಗೂ ಶ್ರದ್ಧಾಭಕ್ತಿಗಳಿಂದ ಅವರೆಲ್ಲ ನಡೆದುಕೊಳ್ಳುತ್ತ ಬಂದಿದ್ದಾರೆ ಮತ್ತು ವೆಂಕ





ಟಾಚಲವನ್ನು ಭೂ ವೈಕುಂಠವೆಂದೇ ಸಂದರ್ಶಿಸಿ ಅನುಭವಿಸಿ ಹಾಡಿದ್ದಾರೆ ಕುಣಿದಿದ್ದಾರೆ ಕುಣಿ ಕುಣಿದು ದಣಿದಿದ್ದಾರೆ ಆ ದಣುವಿನಲ್ಲಿ ಪರಮಾತ್ಮನನ್ನು ಕಂಡಿದ್ದಾರೆ ಸ್ವಾನಂದದಲ್ಲಿ ಸ್ವರೂಪದರ್ಶನವನ್ನು ಮಾಡಿಕೊಂಡಿದ್ದಾರೆ ಅಂತಹವರಲ್ಲಿ ಕನಕದಾಸರು ಅಗ್ರಪಂಕ್ತಿಯಲ್ಲಿ ಬರುವ ಹರಿದಾಸರು

ಕನಕದಾಸರು, ಕರ್ನಾಟಕದ ಇತಿಹಾಸದಲ್ಲಿ ಸುವರ್ಣಯುಗವೆಂದು ಕರೆಸಿಕೊಳ್ಳುವ ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿದ್ದವರು ಅವರ ಗುರುಗಳು ವ್ಯಾಸರಾಜರು ಪುರಂದರದಾಸರ ಸ್ನೇಹಿತರು ಸಮಚಿತ್ತರು ಆದ್ದರಿಂದ ಇವರ ಕಾಲವನ್ನು ಸುಮಾರು ಕ್ರಿ.ಶ ೧೫೫೦ ಎಂದು ಅನೇಕ ವಿದ್ವಾಂಸರು ಒಪ್ಪಿಕೊಂಡಿದ್ದಾರೆ

ಕನಕದಾಸರು ಧಾರವಾಡ ಜಿಲ್ಲೆಯ ಬಾಡ ಗ್ರಾಮದವರು. ತಾಯಿ ಸಾಧ್ವಿ ಬಚ್ಚಮ್ಮ ತಂದೆ ಬೀರಪ್ಪ, ವಿಜಯನಗರ ಅರಸರ ಕಾಲದಲ್ಲಿ ದಂಡನಾಯಕ ಈ ಮನೆತನದವರೆಲ್ಲ ತಿರುಪತಿಯ ತಿಮ್ಮಪ್ಪನ ಒಕ್ಕಲು ಆದ್ದರಿಂದ ಕನಕದಾಸರಿಗೆ ತೊಟ್ಟಿಲಲ್ಲಿ ಇಟ್ಟ ಹೆಸರು ತಿಮ್ಮಪ್ಪ. ಈ ತಿಮ್ಮಪ್ಪ ಚಿಕ್ಕವನಿದ್ದಾಗಿನಿಂದಲೇ ಗರಡಿಸಾಧನೆ, ಕುಸ್ತಿ, ಕತ್ತಿವರಸೆಗಳಲ್ಲಿ ಪಳಗಿದನು ಅವನಿನ್ನೂ ಪ್ರಬುದ್ಧಾವಸ್ಥೆಗೆ ಬರುವ ಮುನ್ನವೆ ತಂದೆಯನ್ನು ಕಳೆದುಕೊಂಡ. ಆಗ ವಿಜಯನಗರದ ಅರಸರು ಇವನಿಗೇನೇ ಆ ದಂಡನಾಯಕನ ಹುದ್ದೆಯನ್ನು ಕೊಟ್ಟುಗೌರವಿಸಿದರು ಇವನ ದಾರ್ಢ್ಯವು ಚೆನ್ನಾಗಿದ್ದುದರಿಂದ ಆ ಹುದ್ದೆಯನ್ನು ಚೆನ್ನಾಗಿ ನಿಭಾಯಿಸತೊಡಗಿದ ಒಮ್ಮೆ ಇದ್ದಕ್ಕಿದ್ದಂತೆ ಭೂಶೋಧನೆಯನ್ನು ಮಾಡುತ್ತಿದ್ದಾಗ ಅಪಾರವಾದ ಧನರಾಶಿಯು ಇವನಿಗೆ ದೊರೆಯಿತು ಆ ಧನದಿಂದ ತನ್ನ ತಂದೆಗೆ ಪ್ರೀತಿಯಾಗುವಂತೆ ಕಾಗಿನೆಲೆಯಲ್ಲಿ ದೇವಾಲಯವನ್ನು ಕಟ್ಟಿಸಿ ಆದಿಕೇಶವನ ಮೂರ್ತಿಯನ್ನು ಪ್ರತಿಷ್ಠಾಪಿಸಿದನು ಹೀಗೆ ಅಪಾರ ಧನವನ್ನು ಹೊಂದಿ ಅದನ್ನು ಯೋಗ್ಯ ಕಾರ್ಯಕ್ಕೆ ವಿನಿಯೋಗ ಮಾಡಿದುದರಿಂದ ಆತನಿಗೆ ಕನಕನೆಂದು ಕರೆದರು ಮುಂದೆ ಕೆಲವು ದಿವಸಗಳಲ್ಲಿ ತಾಯಿಯು ಪರಂಧಾಮವನ್ನು ಹಿಡಿದಳು ಅದರಂತೆ ತಾನು ಬಹಳ ಪ್ರೀತಿಸುತ್ತಿದ್ದ ಹೆಂಡತಿಯೂ ಕಾಲವಶವಾದಳು ಹೀಗಾಗಿ ವೈರಾಗ್ಯವುಂಟಾಗಿ, ಅಲ್ಲಲ್ಲಿ ದೇವರನ್ನು ಕುರಿತು ಹಂಬಲಿಸಿ ಹರಿದಾಡಿ, ವ್ಯಾಸರಾಯರ ಶಿಷ್ಯನಾಗಿ ಸ್ವರೂಪದರ್ಶನವನ್ನು ಪಡೆದು ಸ್ವಾನಂದವು ಲಭ್ಯವಾಗಿ ಶ್ರೇಷ್ಠ ಹರಿದಾಸನಾದಾಗ ಕನಕ, ಕನಕದಾಸರಾದರು.

ಕನಕದಾಸರು ಮುಂದೆ ತಮ್ಮ ಜೀವನದುದ್ದಕ್ಕೂ ಆ ಅಗಲ, ಈ ಅಗಲ, ಊ ಅಗಲ, ಏ ಅಗಲ - ಈ ರೀತಿ ಅಡ್ಡಾಡಿ ಅಪಾರ ಜೀವನಾನುಭವವನ್ನು ಪಡೆಯುತ್ತ, 'ಕಾಗಿನೆಲೆಯಾದಿ ಕೇಶವ', 'ಬಾಡದಾದಿ ಕೇಶವ', 'ವರಪುರದ ಚೆನ್ನಿಗರಾಯ', - ಈ ಮೊದಲಾದ ಅಂಕಿತಗಳಿಂದ ಆ ಅನುಭವಗಳನ್ನು ನೂರುಗಟ್ಟಲೆ ಕೀರ್ತನೆಗಳಲ್ಲಿ ಇಳಿಸಿದರು ಈ ಎಲ್ಲ ಕೀರ್ತನೆಗಳು ಸರ್ವಸಮರ್ಪಣಾಭಾವದಿಂದ ಕೂಡಿದ್ದು ಸಮಾಜವನ್ನು ಬಡಿದೆಬ್ಬಿಸುವಲ್ಲಿ, ಸಾಧಕನಿಗೆ ಸ್ವರೂಪ ಜ್ಞಾನವನ್ನು ಒದಗಿಸಿಕೊಟ್ಟು ಸ್ವಾನಂದವನ್ನು ಪಡೆಯಲು ಪ್ರಚೋದಿಸುತ್ತವೆ

ಕನಕದಾಸರಿಗೆ ವೈರಾಗ್ಯವು ಆವಿರ್ಭಾವ ಆದ ಕೂಡಲೇ ಬಹುಶಃ ಕೆಲಕಾಲ ತಿರುಪತಿಯಲ್ಲಿಯೇ ವಾಸವಾಗಿರಬೇಕು ಏಕೆಂದರೆ ಇವರ ಕುಟುಂಬದ ಅಧಿದೈವತ ತಿರುಪತಿಯ ಶ್ರೀನಿವಾಸ ಎಂಬುದನ್ನು ಈ ಮುನ್ನ ಉಲ್ಲೇಖಿಸಲಾಗಿದೆ ಅಲ್ಲದೆ ಇವರು ತಿರುಪತಿಯ ಯಾತ್ರೆಯನ್ನು ಅನೇಕ ಸಲ ಮಾಡಿರುವುದಕ್ಕೆ ಅವರ ಅನೇಕ ಹಾಡುಗಳು ಸಾಕ್ಷಿನುಡಿಯುತ್ತವೆ ಆದರೆ ಉಳಿದ ತೀರ್ಥಕ್ಷೇತ್ರಗಳಿಗೆ ಮತ್ತೆ ಮತ್ತೆ ಹೋಗಿರಲಿಕ್ಕಿಲ್ಲ ತಿರುಪತಿಗೆ ಮಾತ್ರ ಅವರು ಬರಬೇಕೆನ್ನಿಸಿದಾಗಲೆಲ್ಲ ಬಂದಿದ್ದಾರೆ ನೆಮ್ಮದಿಯೊಂದಿಗೆ ಆತ್ಮಾನುಸಂಧಾನವನ್ನು ಮಾಡಿಕೊಂಡು ವ್ಯಾಪಕವಾಗಿದ್ದಾರೆ. ಶ್ರೀನಿವಾಸನನ್ನು ಸ್ತುತಿಸಿಯೇ, ನಿಂದಾಸ್ತುತಿಗೆ ಒಳಪಡಿಸಿಯೇ ಆತನ ದರ್ಶನವನ್ನು ಪಡೆದಿದ್ದಾರೆ ಮುಯ್ಯಕೆ - ಮುಯ್ಯ ತೀರಿಸಿಕೊಂಡಿದ್ದಾರೆ ಈ ನಿಟ್ಟಿನಲ್ಲಿ ಉಳಿದೆಲ್ಲ ಹರಿದಾಸರಿಗಿಂತ ಕನಕದಾಸರ ಹಾಗು ಶ್ರೀನಿವಾಸನ ಸಂಬಂಧವು ಒಂದು ತೂಕವು ಹೆಚ್ಚಿನ ಭಾಗದ್ದು ಈ ಅವಿನಾಭಾವವನ್ನು ಅವರು ತಿರುಪತಿಯ ತಿಮ್ಮಪ್ಪನನ್ನು ಕುರಿತು ಆಯಾ ಸಂದರ್ಭದಲ್ಲಿ ರಚನೆ ಮಾಡಿರುವ ಕೀರ್ತನೆಗಳಿಂದ ಸ್ಪಷ್ಟವಾಗುತ್ತದೆ

ನಮ್ಮ ದೇಶದ ಜನಪದದಲ್ಲಿ ದೇವರನ್ನು ನಾವು ನಮ್ಮಿಂದ ದೂರ ಇರಿಸಿಯೇ ಇಲ್ಲ. ಆತನನ್ನು ನಮ್ಮ ಪರಿವಾರದವನೆಂದೇ ಭಾವಿಸಿಕೊಂಡು ಆತನೊಡನೆ ತುಂಬ ಸಲುಗೆಯಿಂದ ಇರುತ್ತೇವೆ ಒಮ್ಮೆ ತಿರುಪತಿಯ ಶ್ರೀನಿವಾಸನು ಕನಕದಾಸರನ್ನು ತಿರುಪತಿಗೆ ತನ್ನ ಮದುವೆಗೆ ಆಹ್ವಾನಿಸುತ್ತಾನೆ ಶ್ರೀನಿವಾಸ ಅರ್ಥಾತ್ ವೆಂಕಟರಮಣನು ವಿಷ್ಣುವಿನ ಅವತಾರಗಳಲ್ಲಿ ಒಂದೆಂಬುದು ಕನಕದಾಸರಿಗೆ ಗೊತ್ತಿತ್ತು. ಇದೇನು ವಿಚಿತ್ರ, ಈತನಿಗೆ ಅದ್ಯಾವ ಸ್ವಯಂ - ವರ ಎನ್ನುತ್ತ ಅವರು ತಿರುಪತಿಗೆ ಹೊರಡುತ್ತಾರೆ ಭಕ್ತನು ಬರುವುದು ಗೊತ್ತಾಗಿ ತನ್ನ ಮಹಂತನನ್ನು ಸ್ವಾಗತಕ್ಕಾಗಿ ಶ್ರೀನಿವಾಸನು ಕಳಿಸುತ್ತಾನೆ ಗುರುತು ಹೇಳಿರುವುದಿಲ್ಲ ಮಹಂತನಿಗೆ ಕನಕದಾಸರ ಗುರುತೇ ಹತ್ತುವುದಿಲ್ಲ. ಆದರೆ ಮಹಂತನು, ಕನಕದಾಸರು ಎಲ್ಲಿ ಬರುತ್ತಿದ್ದಾರೆಂದು ಕನಕದಾಸರನ್ನೇ ಕೇಳಿದಾಗ, "ಮುಂದು ಬರುವವರಿಗೆ ಹಿಂದೆ, ಹಿಂದೆ ಬರುವವರಿಗೆ ಮುಂದೆ" ಎಂದು ಕನಕದಾಸರು ಚಮತ್ಕಾರವಾಗಿ ಉತ್ತರಿಸಿದ್ದು ಅರ್ಥವಾಗದೆ, ಈ ದಾಸರು ಹುಚ್ಚರೆಂದು ಭಾವಿಸಿ, "ನೀವು ಯಾತರರು?" ಎಂದು ಕೇಳಿದಾಗ, ಅವರಿಂದ ಬಂದ, "ಯಾತರವನೆಂದು ಸುರಲಿ - ಜಗನ್ನಾಥನು ಮಾಡಿದನು ನರಜನ್ಮವ" ಎಂಬ ಪಲ್ಲವಿಯೊಡನೆ ಬಂದ ಕೀರ್ತನೆಯು ಹುಟ್ಟಿನ ಮರ್ಮವನ್ನೇ ಭೇದಿಸಿಟ್ಟು, "ಹಚ್ಚಡದ ಮೇಲಿನ್ನು ರೊಚ್ಚು ಬಿದ್ದಂತೆ ತನು ಮುಚ್ಚಿಕೊಂಡಿದ್ದು ಹೆಣಗಾಡುತ ನಿಶ್ಚಿಂತ ನಿರ್ದೋಷ ನೆಲೆಯಾದಿ ಕೇಶವನ ಹುಚ್ಚೇರಿದೆನಗೆ ಇನ್ಯಾತರ ಕುಲವಯ್ಯ" ಎಂದು ಹಾಡಿದಾಗ ಸಪ್ತ ಪರ್ವತಗಳು ಮನುಕುಲದ ಮೂಲವನ್ನೇ ಎತ್ತಿ ಸಪ್ತಸ್ವರವಾಗಿ ಹಾಡಿದುವು. ಇದೆಲ್ಲ ಆ ಮುಗ್ಧ ಮಹಂತನಿಗೆ ಅರ್ಥವಾಗದೇ ಕಣ್ಣುಕಣ್ಣು ಬಿಟ್ಟು ಮರವನ್ನು ಸೇರಿದನು. ಆಗ ಕನಕದಾಸರು ನೆಲೆಗಾಣದೆ ತತ್ತರಿಸಿದಾಗ, ತುತ್ತುಸಿಗದೆ ನಿತ್ರಾಣವಾದಾಗ, ಛಳಿಯಲ್ಲಿ ಸಿಕ್ಕು ಗುಗ್ಗರಿಗಟ್ಟಿದಾಗ, ಸಿಕ್ಕ ಸ್ಥಳದಲ್ಲಿಯೇ ಮಲಗುವ ಮುನ್ನ,

ಬಂದೆವಯ್ಯ ಗೋವಿಂದಶೆಟ್ಟಿ
ಇಂದು ನಿನ್ನ ಮದುವೆ ಬಾರೆಂದೆನೆ ||ಪ||
ಅಪ್ಪಾಲು ಅತಿರಸ ತುಪ್ಪ ಚೆನ್ನಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪ್ಪರೂಪವಾದ ಕಜ್ಜಯವನೆಲ್ಲ
ಚಪ್ಪನ ದೇಶಕ್ಕೆ ಮಾರುವ ಶೆಟ್ಟಿ ೧

ಒಡೆದಮಡಕೆಯಲಿ ಅರೆದುನಾಮವಮಾಡಿ
ತಡೆಯದೆ ಒಂದೊಂದು ಕಾಸಿಗೆ ಕೊಡುವ
ಒಡಲು ತುಂಬೆ ಮಿಕ್ಕ ಭಕ್ತರ ನೋಡದೆ
ಒಡವೆಯ ಗಳಿಸುವ ಲೋಭಿ ಶೆಟ್ಟಿ ೨

ಶೇಷಗಿರಿಯ ಮೇಲೆ ಇರುವ ತಿಮ್ಮಶೆಟ್ಟಿ
ದೇಶದೇಶಕ್ಕೆಲ್ಲ ಪ್ರಸಿದ್ಧ ಶೆಟ್ಟಿ
ಆಶೆಯ ತೋರಿ ಮುಡುಪನ್ನೆ ತರಿಸುವ
ಕೇಶವನಾರಾಯಣ ವೆಂಕಟಶೆಟ್ಟಿ ೩

ಎಂಬುದಾಗಿ ಪರಮಾತ್ಮನನ್ನು ತರಾಟೆಗೆ ತೆಗೆದುಕೊಂಡು ಪರಿಹಾಸ್ಯದ ಧಾಟಿಯಲ್ಲಿ ಹಾಡಿ ನಿದ್ದೆ ಹೋದರು ಈ ಹಾಡಿನಲ್ಲಿ ಶ್ರೀನಿವಾಸ ಶೆಟ್ಟಿಯ ದಿನಚರ್ಯೆಯೆಲ್ಲ ಬಹು ಸಖ್ಯವಾಗಿ ಮೂಡಿದೆ. ಸಖ್ಯದ ಪರಿಹಾಸ್ಯಕ್ಕೆ ಮನಸೋತ ಶ್ರೀನಿವಾಸನು ಪರಿಚಾರಕನ ವೇಷದಲ್ಲಿ ಬಂದು ಇವರನ್ನು ಎಬ್ಬಿಸಿ ಓಗರ ನೀಡಿ, ಹಾಲು ಕುಡಿಸಿ, ತನ್ನ ಜರತಾರಿ ಧೋತರವನ್ನು ಹೊದಿಸಿಹೋಗಿಬಿಟ್ಟ. ಮಾರನೆಯ ದಿನ ವೆಂಕಟಪ್ಪನ ಧೋತರ ಕಾಣಲಿಲ್ಲ ಹುಡುಕಾಟ. ಕೊನೆಗೆ ಕನಕದಾ

ಸರ ಮೈಮೇಲೆ ಇರುವುದನ್ನು ಕಂಡು ಪರಿಚಾರಕರು ಅವರನ್ನು ದಂಡಿಸಿದರು ಮೈಮೆತ್ತಗಾಯಿತು ಮದುವೆಯ ಉಂಡಿಯ ಬಿಸಿ ಇದು ಎಂದು ದಾಸರು, ವೆಂಕಟರಮಣ ಗೋವಿಂದನನ್ನು ಸ್ತುತಿ ಮಾಡ ತೊಡಗಿದರು "ಗೋವಿಂದ ಸಲಹೆನ್ನನು - ಸದಾನಂದ ಗೋವಿಂದ ಸಲಹೆನ್ನನು! ತಿರುಪತಿ ನೆಲೆಯಾದಿ ಕೇಶವ ಹರಿಯೇ" ಎಂದು ತದೇಕ ಚಿತ್ತದಿಂದ ಮೊರೆಯಿಟ್ಟಾಗ ಕನಕದಾಸರಿಗೆ ಏಕಾಂತ ಸೇವೆಯು ಲಭಿಸಿತು ಆಗ ಆ ಏಕಾಂತದಲ್ಲಿಯ ದಿವ್ಯದರ್ಶನದಲ್ಲಿ ಒಬ್ಬರಿಗೊಬ್ಬರು ಪರಿಹಾಸ್ಯದ ಮೂದಲಿಕೆಯಲ್ಲಿ ನಕ್ಕು ನಲಿದಿರಬೇಕು. ಆ ಸಂದರ್ಭದಲ್ಲಿ ಮೂಡಿಬಂದ ಕನಕದಾಸರ ಹಾಡು ವಿಷ್ಣುವಿನ ಇತಿಹಾಸದ ಪದರು ಪದರುಗಳನ್ನು ಬಿಚ್ಚಿಟ್ಟಿದೆ. ಗೆಳೆತನದ ಮುಂದೆ ದೇವರಾದರೇನಂತೆ, ಅವನು ನಮ್ಮ ಗೆಳೆಯ ಎಂಬ ಪರಿಶುದ್ಧ ಸ್ನೇಹವು ಸಂಗೀತದಲ್ಲಿ ಅಲೆ ಅಲೆಯಾಗಿ ಹಬ್ಬಿ ಚಿರಂತನವಾದ ಜಗದ ಹೃದಯಕ್ಕೆ ಆ ಗೋವಿಂದನ ಇತಿಹಾಸವು ನೆಮ್ಮದಿಯನ್ನು ನೀಡುವ ಸಹಜತೆಯಿಂದ ಕೂಡಿದ ಸತ್ವವಾಗಿ ಬಿಡುತ್ತದೆ,

ನಿನ್ನ ನಾನೇನೆಂದೆನೋ ವೆಂಕಟರಾಯ
ಎನ್ನ ನೀ ಸಲಹ ಬೇಕೋ ಪ
ನಿನ್ನ ನಾನೇನೆಂದೆ ನಿಗಮಗೋಚರಸ್ವಾಮಿ
ಪನ್ನಂಗ ಶಯನ ಪಾಲ್ಗಡಲೊಡೆಯನೆ ಕೃಷ್ಣ
ಅ.ಪ.

ಘೋರಸೋಮಕ ವೇದಚೋರತಮನಸೀಳಿ
ವಾರಿಧಿಗಿಳಿದು ಪರ್ವತವನೆತ್ತಿ
ಧಾರುಣಿಯ ಕದ್ದ ದನುಜದಲ್ಲಣನಾದ
ನಾರಸಿಂಹ ನಿನಗೆ ಶರಣೆಂದೆನಲ್ಲದೆ

ಬತ್ತಲಿದ್ದವನೆಂದೆನೆ - ತೇಜಿಯನೇರಿ
ಒತ್ತಿ ಆಳ್ದವನೆಂದೆನೆ - ಬಾರಿ ಬಾರಿಗು
ಮತ್ತೆ ಪುಟ್ಟಿದನೆಂದೆನೆ - ಆದಿಕೇಶವ
ಭಕ್ತವತ್ಸಲನೆಂದು ಪೊಗಳಿದೆನಲ್ಲದೆ ||

ಹೀಗೆ ತರಂಗ ತರಂಗವಾಗಿ ಬರುವ ಮೂರು ನುಡಿಯ ಆಲಾಪನೆಯಲ್ಲಿಯ ನಿವೇದನಾ ರೀತಿಯು ಆತ್ಮೀಯ ಗೆಳೆತನದ ಪ್ರತ್ಯೇಕ ನಮ್ಮ ಶ್ರೀನಿವಾಸನ ಸ್ನೇಹವು ಇಂತಹ ಅಪ್ಪಟ ಹಾಲು ಈ ಸಖ್ಯದ ಫಲವಾಗಿಯೇ ವ್ಯಾಸರಾಯರಂತಹ ಗುರುಗಳು ತಮಗೆ ದೊರೆತದ್ದು ಎಂಬುದನ್ನೂ, "ಹರಿ ನಿನ್ನ ಪದಕಮಲ ಗುಣದಿಂದಲಿ ಎನಗೆ, ದೊರಕಿತೇ ಗುರುಸೇವೆ ಹರಿಯೆ" - ಎಂಬ ಪಲ್ಲವಿಯೊಡನೆ ಆರಂಭವಾಗುವ ಕನಕದಾಸರ ಕೀರ್ತನೆಯಲ್ಲಿ ನೆನೆಸಿಕೊಂಡ ಅವರು ತಮ್ಮ ಬದುಕಿನ ಇತಿಹಾಸವನ್ನೆಲ್ಲ ಅಲ್ಲಿ ಬಗೆದಿಟ್ಟು-



ನೀರು ಶಕ್ತಿಯ ಸೇರಿ ಘೋರ ಮುತ್ತಾದ ಪರಿ
ಸೇರಿಸೋ ನಿನ್ನಂಘ್ರಿ ಹರಿಯೇ
ಆರಿಗಂಜುವನಲ್ಲಅಧಿಕಪುರಿಕಾಗೆನೆಲೆಯಾದಿ
ಕೇಶವರಾಯನಾದ ಶ್ರೀಹರಿಯೆ

ಎಂದು ಮುಕ್ತಾಯಗೊಳಿಸುವಲ್ಲಿ, ಶ್ರೀಹರಿಯ ಪಾದದಲ್ಲಿ ಅರ್ಥಾತ್ ಭೂವೈಕುಂಠವಾದ ತಿರುಪತಿಯ ಶ್ರೀನಿವಾಸನ ಪಾದದಲ್ಲಿ ಸ್ವಾನಂದವನ್ನು ಬಯಸಿರುವುದರ ಸಂಜ್ಞೆಯನ್ನು ಕಾಣಬಹುದಾಗಿದೆ

ಏಕೆಂದರೆ ಕನಕದಾಸರ ಕೊನೆಯ ದರ್ಶನವು ಇಹಲೋಕದವರಿಗೆ ಆದದ್ದು ತಿರುಪತಿಯಲ್ಲಿಯೇ ಎಂಬ ನಂಬಿಕೆಯು ಬಹಳಷ್ಟು ಜನರಿಗೆ ಇದೆ. ಅದು ಸತ್ಯವಿರಲೂ ಬಹುದು ಈ ಹಿನ್ನೆಲೆಯಲ್ಲಿ ಆ ಕೊನೆಯ ನಿಮಿಷದಲ್ಲಿ ಈ, "ಕನಕದಾಸರು, ಪುರಂದರದಾಸರ ತಂಬೂರಿಯನ್ನು ತಿರುಪತಿಯ ಭಂಡಾರದಲ್ಲಿಟ್ಟರು ತಮ್ಮ ಏಕತಾರೆಯನ್ನೂ ದಂಡವನ್ನೂ ವೆಂಕಟಪತಿಯ ಗರ್ಭಗೃಹ ಪ್ರವೇಶ ಮಾಡುವ ದ್ವಾರದ ಮೇಲ್ಭಾಗದಲ್ಲಿ ಬಂಧಿಸಿದರು ವ್ಯಾಸರಾಯ ಗುರುಗಳಿಗೆ ನಮೋ ಎಂದರು ಪುರಂದರ ದಾಸರ ಪಾದವೇ ಗತಿಯೆಂದರು ಗೋವಿಂದನ ಸೇವೆಗೆಂದು ಒಳಗೆ ಪ್ರವೇಶ ಮಾಡಿದರು - ಎಂಬ ಉಲ್ಲೇಖವನ್ನು ವಿದ್ವಾಂಸರು ಮಾಡಿದ್ದಾರೆ. ಹೀಗೆ ಒಳಗೆ ಹೋದವರು ಏಕಾಂತ ಸೇವೆಯಿಂದ ಹೊರಗೆ ಬರಲೇ ಇಲ್ಲ ತೆರೆ ತೆರೆದಾಗ ಅವರು ಅಲ್ಲಿರಲಿಲ್ಲ ಇದೆಲ್ಲ ಶ್ರದ್ಧೆಯ ಮಾತು ಇನ್ನೂ ಕೆಲವರು ಕನಕದಾಸರು ತಮ್ಮ ಜೀವಿತಕಾಲದ ಕೊನೆಯಗಳಿಗೆಯಲ್ಲಿ ಕದರು ಮಂಡಲಿಗೆಯಲ್ಲಿದ್ದು, ಕಾಗಿನೆಲೆಯ ಆದಿಕೇಶವ ಸ್ವಾಮಿಯ ಪಾದದೆಡೆಯಲ್ಲಿ ತಮ್ಮ ಜೀವನಾಂತ್ಯಗೊಳಿಸಿದರೆಂದೂ ಹೇಳುವವರಿದ್ದಾರೆ

ಆದರೆ ಕನಕದಾಸರು ತಿರುಪತಿಗೆ ಹಲವಾರು ಸಲ ಬಂದಿರುವುದಂತೂ ನಿಜ ಏಕೆಂದರೆ ವ್ಯಾಸರಾಯರ ಸನ್ನಿಧಿಯಲ್ಲಿದ್ದಾಗ ವರ್ಷಕ್ಕೊಮ್ಮೆಯಾದರೂ ತಿರುಪತಿಯ ಯಾತ್ರೆಯು ನಡೆಯುತ್ತಿತ್ತು ಆಗ ವ್ಯಾಸರಾಯರ ಮೇನೆಯು ಹೊರಡುವ ಮುನ್ನವೇ ಕನಕದಾಸರು ಮುಂದೆ ಮುಂದೆ ಸಾಗಿ, ಗುರುಗಳು ಬರುವ ವಾರ್ತೆಯನ್ನು ಹಬ್ಬಿಸುತ್ತಿದ್ದರು ಇದರಿಂದಾಗಿ ಸಾಮಾನ್ಯ ಜನರಿಗೆ ಗುರುದರ್ಶನ ಹಾಗು ಗುರುಗಳ ಉಪದೇಶಗಳು ಲಭ್ಯವಾಗುತ್ತಿದ್ದುವು. ಈ ಕಾರ್ಯದಲ್ಲಿ ಕನಕದಾಸರ ಜನಪರಧೋರಣೆಯೇ ಎದ್ದು ಕಾಣುತ್ತದೆ. ಈ ಇತಿಹಾಸದಿಂದಾಗಿ ತಿರುಪತಿಯ ಶ್ರೀನಿವಾಸನ ಸದರವು ಕನಕದಾಸರಮೇಲೆ ಬಹಳ ಗಾಢವಾಗಿತ್ತೆಂದು ತೋರುತ್ತದೆ. ತತ್ ಪರಿಣಾಮವಾಗಿ ಕನಕದಾಸರ ಕೀರ್ತನೆಗಳಲ್ಲಂತೂ ಬೆರಳಿಟ್ಟ ಕಡೆ ತಿರುಪತಿಯ ಶ್ರೀನಿವಾಸನ ಕರುಣೆಯು ಚಿಮ್ಮುತ್ತಿರುತ್ತದೆ ಈ ಕರುಣೆಯ ಪರಿಧಿಯನ್ನು ಬಿಟ್ಟು, ಅವರ ಕೀರ್ತನೆಗಳು, ಬಹಳಷ್ಟು ಮಟ್ಟಿಗೆ ಹೊರ ಬರಲಾರವು.



## ತಿರುಮಲ ತಿರುಪತಿ ದೇವಸ್ಥಾನಗಳು
## ತಮಗೆ ಹಾರ್ದಿಕ ಸ್ವಾಗತವನ್ನು ಬಯಸುತ್ತದೆ.
## ಶ್ರೀ ವೆಂಕಟೇಶ್ವರ ಸ್ವಾಮಿಯ ಅನಂತ ಆಶೀರ್ವಾದ ತಮಗಿರಲಿ.

ಸ್ವಾಮಿ ದರ್ಶನಕ್ಕಾಗಿ ಸರತಿಯ ಸಾಲಿನ ಕೋಣೆಗಳಲ್ಲಿ ಯಾತ್ರಿಕರು ಕಾಯುವ ಕಾಲವ್ಯವಧಿಯನ್ನು ಕಡಿಮೆ ಮಾಡಲೆಂದು ಸುದರ್ಶನ ಟೋಕನ್ ಪದ್ಧತಿಯನ್ನು ಪ್ರವೇಶಗೊಳಿಸಲಾಗಿದೆ. ಈ ಟೋಕನ್‌ಗಳು ಉಚಿತ ವಾಗಿ ತಿರುಮಲೆಯ ವೈಕುಂಠಂ ಕ್ಯೂ ಕಾಂಪ್ಲೆಕ್ಸ್ ಹಾಗೂ ಪ್ರತ್ಯೇಕ ಪ್ರವೇಶದ ಕ್ಯೂಕಾಂಪ್ಲೆಕ್ಸ್‌ಗಳಲ್ಲಿ, ಮತ್ತು ತಿರುಪತಿಯ ರೈಲ್ವೆ ನಿಲ್ದಾಣದ ಹಿಂಬದಿಯ ಕೇಂದ್ರ ಸ್ವಾಗತ ಕಚೇರಿಯಲ್ಲಿ ದೊರೆಯುತ್ತವೆ.

ಧರ್ಮ ದರ್ಶನಕ್ಕೆ ಬಂದವರು ವೈಕುಂಠಂ ಕ್ಯೂ ಕಾಂಪ್ಲೆಕ್ಸ್ ಬಳಿಯಲ್ಲಿ ಟೋಕನ್ ಪಡೆಯಬಹುದು ಟೋಕನ್ ಪಡೆದ ನಂತರ ನೀವು ಮರಳಿ ಟೋಕನ್ನಿನಲ್ಲಿ ಸೂಚಿಸಿರುವ ಸಮಯಕ್ಕೆ ವೈಕುಂಠಂ ಕ್ಯೂ ಕಾಂಪ್ಲೆಕ್ಸ್‌ಗೆ ಬಂದರೆ ಸಾಕು ಅಲ್ಲಿ ತಮ್ಮ ಟೋಕನ್‌ಗಳನ್ನು ಪರಿಶೀಲಿಸಿ ರೂ 5/- ಲಾಡು ಟೋಕನ್ ನೀಡಿ ನಂತರ ದರ್ಶನದ ಸಾಲಿಗೆ ಪ್ರವೇಶ ಕಲ್ಪಿಸಲಾಗುವುದು ಪ್ರತ್ಯೇಕ ಪ್ರವೇಶವನ್ನು ಬಯಸುವವರು ಪ್ರತ್ಯೇಕ ಪ್ರವೇಶದ ಕ್ಯೂ ಕಾಂಪ್ಲೆಕ್ಸ್ ಬಳಿಯಲ್ಲಿ ಟೋಕನ್ ಪಡೆಯಬಹುದು. ಪ್ರತ್ಯೇಕ ಪ್ರವೇಶದ ರೂ 50/- ಅಥವಾ ರೂ. 40/- ಟಿಕೆಟ್ ಕೊಂಡುಕೊಂಡ ಬಳಿಕವೇ ಈ ಟೋಕನ್ ನೀಡಲಾಗುತ್ತದೆ ಟೋಕನ್‌ನಲ್ಲಿ ಸೂಚಿಸಿದ ಸಮಯಕ್ಕೆ ತಾವು ಪ್ರತ್ಯೇಕ ಪ್ರವೇಶದ ಕ್ಯೂ ಕಾಂಪ್ಲೆಕ್ಸ್ ತಲುಪಿದರೆ ಸಾಕು; ತಮ್ಮ ಟೋಕನ್ ಪರಿಶೀಲಿಸಿ ನಂತರ ತಮ್ಮನ್ನು ದರ್ಶನಕ್ಕಾಗಿ ನಡೆದಿರುವಸಾಲಿನಲ್ಲಿ ಅನುಮತಿಸಲಾಗುವುದು

ಕ್ಯೂ ಕಾಂಪ್ಲೆಕ್ಸ್‌ನೊಳಗೆ ತಾವು ಸೇರಿದ ನಂತರ ಒಂದೆರಡು ಗಂಟೆಗಳಲ್ಲಿ ತಮಗೆ ಸ್ವಾಮಿಯ ದರ್ಶನ ಸಾಧ್ಯವಾಗುತ್ತದೆ

ಒಬ್ಬರ ಟೋಕನ್ ಅನ್ನು ಮತ್ತೊಬ್ಬರು ಬಳಸುವುದು ನಿಷಿದ್ಧ ದರ್ಶನ ಪೂರ್ತಿ ಆಗುವವರೆಗೆ ಈ ಟೋಕನ್‌ಗಳನ್ನು ಹಾಳು ಮಾಡಬಾರದು, ತೆಗೆಯಬಾರದು. ಟೋಕನ್‌ನಲ್ಲಿ ಸೂಚಿಸಿದ ಸಮಯವನ್ನು ಮೀರಿ ಒಂದು ಗಂಟೆಯವರೆಗೆ ದರ್ಶನಕ್ಕೆ ಅನುಮತಿ ನೀಡುವ ಅವಕಾಶವಿದೆ

ತಮಗೆ ಮತ್ತೂ ಚೆನ್ನಾದ ಸೇವೆ ಮಾಡಬೇಕೆಂದು, ತಮ್ಮ ಸಹಕಾರದೊಡನೆ ಸಲಹೆಗಳನ್ನು ಸ್ವಾಗತಿಸುತ್ತೇವೆ.

ಕಾರ್ಯನಿರ್ವಹಣಾಧಿಕಾರಿ

ಅಂತಹ ನಿದರ್ಶನಗಳನ್ನು ಇಲ್ಲಿ ಗುರುತಿಸಲು ಶ್ರೀನಿವಾಸನ ದಯೆಯಿಂದ ಪ್ರಯತ್ನಿಸಲಾಗಿದೆ. ಈ ನಿದರ್ಶನಗಳಿಗಾಗಿ ಕನಕದಾಸರ ಕೀರ್ತನೆ ಗಳಿಂದ ಎತ್ತಿದ ಪಾದಗಳನ್ನು, ಸಮಾಜಪುಸ್ತಕಾಲಯ ಧಾರವಾಡದವರು ಕ್ರಿ.ಶ. ೧೯೬೫ ರಲ್ಲಿ, ಡಾ|| ಕೃಷ್ಣಶರ್ಮಾ ಬೆಟಗೇರಿ ಹಾಗು ಹುಚ್ಚೂರಾವ್ ಬೆಂಗೇರಿ ಅವರ ಸಂಪಾದನೆಯಲ್ಲಿ ಪ್ರಕಟಿಸಿದ, "ಶ್ರೀ ಕನಕದಾಸರ ಭಕ್ತಿಗೀತೆಗಳು" ಎಂಬ ಪುಸ್ತಕದಿಂದ ಆಯ್ಕೆಮಾಡಿಕೊಳ್ಳಲಾಗಿದೆ. ಆದ್ದರಿಂದ ನಿದರ್ಶನಗಳ ಮುಂದೆ ಆ ಪುಸ್ತಕದಲ್ಲಿಯ ಹಾಡುಗಳ ಸಂಖ್ಯೆಯನ್ನು ನಮೂದಿಸಲಾಗಿದೆ.

೧. (ಹಾಡು · ೦೪),

ರಾಮಾನುಜರೇ ನಮೋ ನಮೋ
ಸ್ವಾಮಿ ಲಕ್ಷ್ಮಣರೂಪ ನಮೋ ನಮೋ ಪ

ಶೇಷಾವತಾರಿ ಮುನೀಶವಂದಿತ ಆದಿ-
ಕೇಶವಮೂರ್ತಿ ನಮೋ ನಮೋ ||

ಈ ಕೀರ್ತನೆಯನ್ನು ನೋಡಿದಾಗ, ಕನಕದಾಸರು ವ್ಯಾಸರಾಯರ ಸಂಪರ್ಕಕ್ಕೆ ಬರುವ ಮುನ್ನ ರಾಮಾನುಜಾಚಾರ್ಯರ ಶ್ರೀ ವೈಷ್ಣವ ಮತವನ್ನೇ ಆಚರಣೆಯಲ್ಲಿಟ್ಟುಕೊಂಡಿದ್ದು, ಕಾಗಿನೆಲೆಯಿಂದ ತಿರುಪತಿಗೆ ಬಂದಾಗ ವಿಶೇಷವಾಗಿ ಆ ಪ್ರಭಾವವು ಅವರ ಮೇಲೆ ಇದ್ದಿರಬೇಕೆಂದು ಸೂಚನ್ನು ಪಡೆಯಬಹುದು ಇದೇ ಕೀರ್ತನೆಯಲ್ಲಿ ಬರುವ ಶ್ರೀ ಚೂರ್ಣಾದಿ ಒಪ್ಪುವ ನಾಮ ಎಂಬಲ್ಲಿ ಆ ಧ್ವನಿಯು ಇದೆ. 'ಶೇಷಾವತಾರಿ' ಎಂಬಲ್ಲಿಯೂ ಶೇಷಾಚಲದ ಸಂಕೇತವನ್ನು ಕಾಣಬಹುದು.

೨. (ಹಾಡು : ೦೫),

ಮೆರೆವ ಗಿರಿಯ ವಾಸ ಕಪಿಕುಲ ಸೌಮಿತ್ರಿ
ಗೆರೆದೆ ದ್ರೋಣಾದ್ರಿ ಸಂಜೀವನ ಹನುಮ

- ಈ ಕೀರ್ತನೆಯಲ್ಲಿಯ 'ಗಿರಿವಾಸ' ಎಂಬುದು ತಿರುಪತಿಯ ಶ್ರೀನಿವಾಸನನ್ನೇ ಸೂಚಿಸುತ್ತದೆ.

೩. (ಹಾಡು · ೧೧),

ತಿದ್ದುವ ಸದಮಲ
ವೈಷ್ಣವರು ಬರುತಿರೆ ಕಂಡು
ಎದ್ದು ನಮಸ್ಕರಿಸಲೊಲ್ಲೆ ಕನ್ನಡಿ ಮೇಲೆ

* * * * * * * * * * * *

ಮುದ್ದು ನಾಮ ಸ್ಮರಣೆಯನು
ಮಾಡಿ ಯಮನವರ
ಗೆದ್ದು ವೈಕುಂಠದೊಳು ಇರು
ಕಂಡೆಯ ಮರುಳೆ

ಇಲ್ಲಿ "ವೈಷ್ಣವರು" ಎಂಬಲ್ಲಿ ಶ್ರೀವೈಷ್ಣವರು ಎನ್ನಬಹುದೇನೊ? "ಯಮನವರ" ಎಂಬಲ್ಲಿ ಸದಾಚಾರ ಬಲದಿಂದ ಗೆದ್ದು, 'ವೈಕುಂಠ' ಎಂದರೆ ಭೂವೈಕುಂಠವಾದ ತಿರುಪತಿಯ ಶ್ರೀನಿವಾಸನ ಸನ್ನಿಧಿಯಲ್ಲಿಯೇ ಇರಬೇಕೆಂಬ ಅಭಿಪ್ರಾಯವಿರಬೇಕು

೪. (ಹಾಡು · ೧೩),

ತಂದೆ ತಾಯ್ ಆರು
ಆನಿದ್ದ ಊರಾವುದೋ
ಬಂದಿರುವುದೆಲ್ಲಿ ತಾತಂದ ಸತಿಸುತರೆಲ್ಲಿ
ಹಿಂದಾದ ಕುಲಗೋತ್ರ ನಾಮಂಗಳೆಷ್ಟು
ತಾ ಬಂದ ಸುಖದುಃಖ ವೆಷ್ಟು

- ಹೀಗೆ ಸಾಗುವ ಕೀರ್ತನೆಯಲ್ಲಿ ಕಾಗಿನೆಲೆಯಿಂದ ಕನಕದಾಸರು ತಮ್ಮ ಮನೆಯ ದೇವರಾದ ತಿರುಪತಿಯ ವೆಂಕಪ್ಪನ ಹತ್ತಿರ ಬಂದಾಗ ಆತ್ಮನಿವೇದನೆಯಾಗಿ, ಸ್ವರೂಪದರ್ಶನಕ್ಕಾಗಿ ಹಾತೊರೆಯುವ ಜೀವದ ಸಂವೇದನೆಯಾಗಿ ತಾರಕಕ್ಕೆ ಮುಟ್ಟಿರುವುದನ್ನು ಊಹಿಸಬಹುದಾಗಿದೆ.

೫ (ಹಾಡು ೧೭),

ಇಂಬುಂಟು ವೈಕುಂಠಪುರ-
ದೊಳಗೆ ಅಯ್ಯಾ

- ಈ ಪಾದದಲ್ಲಿ ವೈಕುಂಠಪುರವೆಂದರೆ ಭೂವೈಕುಂಠವಾದ ತಿರುಪತಿಯೇ ಹೌದು

೬. (ಹಾಡು · ೧೮),

ಶ್ರೀ ಪತಿಯ ಶ್ರೀನಾಮವೊಂದೇ
ಸಾಕು ಮರುಳೆ

- ಈ ಪಾದದಲ್ಲಿಯ ಶ್ರೀಪತಿ, ಶ್ರೀ ನಾಮಗಳು ಶ್ರೀನಿವಾಸನನ್ನು ಸಂಕೇತಿಸುತ್ತವೆ

೭ (ಹಾಡು ೨೩),

ಪಂಕಜನಾಭನ ಮನೆಯ
ಮಂಕುದಾಸನಯ್ಯ

ಕುಲವಿಲ್ಲದ ಕುನ್ನಿ ದಾಸ - ಈ ಪಾದಗಳಲ್ಲಿ ಶ್ರೀನಿವಾಸನ ಜನಪರವಾಸನೆಯು ಹೊರಹೊಮ್ಮುವ ದಿಸೆಯನ್ನು ಕಾಣಬಹುದು

೮ (ಹಾಡು ೨೫),

ನಿರ್ಮಳದಿ ವೈಷ್ಣವರ
ಮನಮುಟ್ಟಿ ಭಜಿಸಿ

- ಇಲ್ಲಿ ವೈಷ್ಣವರ ಎಂಬಲ್ಲಿ ಶ್ರೀನಿವಾಸನ ಒಕ್ಕಲಿನ ಭಕ್ತರು ಎಂಬ ಅಭಿಪ್ರಾಯವಿದೆ.

೯ (ಹಾಡು · ೨೬),

ಮುಟ್ಟದೇಡಿ ಮುಟ್ಟದೇಡಿ
ಮುರಹರನ ದಾಸರನು
ಕಟ್ಟು ಮಾಡಿದನಂತೆ
ಯಮ ತನ್ನ ದೂತರಿಗೆ ಪ.
ತಿರುಮಣ್ಣು ಶ್ರೀ ಚೂರ್ಣ
ಪೂರ್ಣದ್ವಾದಶನಾಮ
ಸಿರಿ ತುಳಸಿ ವನಮಾಲೆ
ಕೊರಳಿನೊಳಗಿಪ್ಪವರ
ತಿರುಮಂತ್ರ ತೀರ್ಥ
ಪ್ರಸಾದ ಕೊಳಗಾದವರ
ತಿರುಪತಿಯ ಯಾತ್ರೆಯನು
ಮಾಡಿದ ಮಹಾತ್ಮರನು ೧

- ಇಲ್ಲಿ ತಿರುಪತಿಯ ಯಾತ್ರೆಯನ್ನು ಮಾಡಿದ ಮಹಾತ್ಮರ ಮಹತಿಯನ್ನು ಎತ್ತಿ ಹೇಳುವುದಲ್ಲದೆ, 'ಯಮ ತನ್ನ ದೂತರಿಗೆ' ಎಂಬಲ್ಲಿ ಕನಕದಾಸರು ಯಮಧರ್ಮನ ಅಂಶ ಎಂಬುದರ ಪ್ರಸ್ತಾಪವನ್ನೂ ಮಾಡಿದಂತಿದೆ. ಇದೆಲ್ಲ ಕನಕದಾಸರ ಉವಾಚವೇ ಇರುವುದರಿಂದ, ಯಮನ ದೂತರ ಧಾರ್ಷ್ಟ್ಯವು ತಿರುಪತಿಯ ಶ್ರೀನಿವಾಸನ ಭಕ್ತರನ್ನು ಮುಟ್ಟಲಾರ್ಪುದೆ ಎಂಬ ಮನೋಬಲವು ಇಲ್ಲಿದೆ. ಈ ಬಗೆಯು, ಕನಕದಾಸರು - ಶ್ರೀನಿವಾಸರ ಸಂಬಂಧದ ಗಾಢತೆಯನ್ನು ಪ್ರಸ್ತಾಪಿಸುತ್ತದೆ.

೧೦ (ಹಾಡು ೨೭),

ಶೇಷಶಯನ ನಿನ್ನ ಭಾಗವತರ ಸಹ
ವಾಸದೊಳಿರಿಸು ಕಂಡೆಯ ಎನ್ನನು

- ಎಂಬಲ್ಲಿ 'ಶೇಷಶಯನ' ಎಂಬುದು 'ಗಿರಿವಾಸ' ಎಂದರೆ ತಿರುಪತಿಯ ವಾಸವೆಂಬುದರ ಸೆಳವನ್ನು ಸೂಚಿಸುತ್ತದೆ.

೧೧ (ಹಾಡು ೨೮),

ಇಷ್ಟುದಿನ ಈ ವೈಕುಂಠ
ಎಷ್ಟು ದೂರವೋ ಎನುತಲಿದ್ದೆ
ದೃಷ್ಟಿಯಿಂದಲಿ ನಾನು ಕಂಡೆ
ಸೃಷ್ಟಿಗೀಶನೆ ಶ್ರೀರಂಗಶಾಯಿ

"ಭಾಗವತರ ಸಮ್ಮೇಳನ ಕಂಡೆ"

- ಇಲ್ಲಿ, "ವೈಕುಂಠ" ಎಂಬುದು ಭೂ ವೈಕುಂಠ ತಿರುಪತಿಯೇ ಆದಾಗಿದ್ದು ಅಲ್ಲಿ ಭಾಗವತರ ಸಮ್ಮೇಳನವು ನಡೆಯುತ್ತಿರುತ್ತದೆಂಬುದರ ಭಾವ ಅಭಿವ್ಯಕ್ತವಾಗಿದೆ ಈ ಸಮ್ಮೇಳನದಲ್ಲಿ ಶ್ರೀನಿವಾಸನ ಅನುಗ್ರಹಕ್ಕಾಗಿ ಪರಿತಪಿಸುತ್ತಿರುವ ಭಕ್ತಾದಿಗಳ ಸಮೂಹವು ನೆರೆದಿರುವುದೆಂತಲೂ, ಅಲ್ಲಿ ಶ್ರೀನಿವಾಸನ ದರ್ಶನದ ಬಗ್ಗೆ ಚಿಂತನ ಮಂಥನಗಳು ಜ್ಞಾನಸತ್ರಗಳು ಭಜನೆ ಇತ್ಯಾದಿಗಳು ಸದಾ ನಡೆದಿರುವಂತೆಯೂ ಇರುವ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿರುವುದು ಮನೋಗಮ್ಯ. ಈ ಕೀರ್ತನೆಯ ಸುಭಗತೆಯಲ್ಲಿ ಕನಕದಾಸರು ಹಾಗು ಶ್ರೀನಿವಾಸನಿರುವ ಶ್ರೀ ವೈಕುಂಠದ ಅನ್ಯೋನ್ಯತೆಯು ಅವಿನಾಭಾವವಾಗಿ ಸೂತ್ರ ಸೂತ್ರವಾಗಿ ಹೆಣೆದುಕೊಂಡಿರುವುದು ಸ್ಪಷ್ಟವಾಗುತ್ತದೆ

೧೨ (ಹಾಡು ೩೫),

ಗರುಡ ಶೇಷಾದಿಗಳು
ಪೊತ್ತುಕೊಂಡಿಹ ಪಾದ
ಧರೆಯ ಈರಡಿಮಾಡಿ
ಅಳೆದ ಪಾದ
ಸಿರಿ ತನ್ನ ತೊಡೆಯ
ಮೇಲಿರಿಸಿ ಸೇವಿಪ ಪಾದ
ವರ ಕಾಗಿನೆಲೆಯಾದಿ
ಕೇಶವನ ಪಾದ

- ಇಲ್ಲಿ ಕನಕದಾಸರು, "ಗರುಡ, ಶೇಷ, ಸಿರಿ" ಇತ್ಯಾದಿ ದೇವತೆಗಳನ್ನು ಹೆಸರಿಸುವಾಗ, ಅವರ ಕಣ್ಣುಮುಂದೆ ತಿರುಪತಿ - ತಿರುಮಲೈಗಳ ಸಪ್ತಾದ್ರಿಗಳ ಮಹಿಮೆಯು ಕಣ್ಣಿಗೆ ಕಟ್ಟಿದಂತಾಗಿರುವುದನ್ನು ಸ್ಮರಣೆಗೆ ತರುತ್ತದೆ.

೧೩. (ಹಾಡು ೩೬),

ಚೆನ್ನ ಗಿರಿಯಿರಲಿಕ್ಕೆ
ಕಬ್ಬಿಣದ ಮೊರಡಿಯೇಕೆ

- ಇಲ್ಲಿಯ ಪ್ರತಿಮಾ ವಿಲಾಸದಲ್ಲಿ, "ಚಿನ್ನದ ಗಿರಿ" ಎಂಬುದು ತಿರುಪತಿಯ ಬೆಟ್ಟಗಳ ಸೊಗಡನ್ನು ಕರುಳಿಗೆ ತಂದು ಒಂದು ಬಗೆಯ ದೈವಾನುಭವವನ್ನು ನೀಡುತ್ತದೆ

೧೪ (ಹಾಡು ೩೨),

ವರ ಕೌಸ್ತುಭವು ಕೊರಳಿನೊಳಗೆ ಆ
ಭರಣ ವಾವುದು ತೊಡಿಸಲಿ?

* * * * * * * * * * *

ಅಣುರೇಣು ಪರಿಪೂರತಿಗೆ ನಾ ಪ
ದಕ್ಷಿಣೆ ಯೆಂತು ಸುತ್ತಿ ಬರಲಿದೇವ

- ಇಲ್ಲಿ ವೆಂಕಟೇಶ್ವರ ಸ್ವರೂಪವು ಕಣ್ಣಿಗೆ ಕಟ್ಟುತ್ತದೆ

೧೫ (ಹಾಡು ೩೬),

ಪರಮ ಪುರುಷ ಹರಿ ಗೋವಿಂದ - ಸಿರಿ
ಧರ ನಾರಾಯಣ ಗೋವಿಂದ
"ಮ- ಹೀತಳವನು ತಂದೆ ಗೋವಿಂದ"

- ಇಲ್ಲಿಯ 'ಗೋವಿಂದ' ಎಂಬ ತರಂಗಗಳಲ್ಲಿ ಶ್ರೀನಿವಾಸನು ಪುಳುಕಿದ್ದು ನಿಲ್ಲುತ್ತಾನೆ

೧೬. (ಹಾಡು ೪೦),

ರಾಮಗೋವಿಂದ ಹರೆ
ಕೃಷ್ಣ ಗೋವಿಂದ
ದಾಮೋದರ ಹರಿ
ವಿಷ್ಣು ಮುಕುಂದ
"ಪ್ರತಿ ವಾದಿಸಿ ದಯವೇರಿ ನಲಿದವನೆ"

- ಇಲ್ಲಿಯೂ ವೆಂಕಟರಮಣನ ಚಟುವಟಿಕೆಗಳು ಆ ಕೀರ್ತನೆಯ ಅಲೆಗಳಲ್ಲಿ ನೆಲೆಯಾಗಿರುವುದನ್ನು ಸೋಸಿ ನೋಡಬಹುದು

೧೭ (ಹಾಡು ೪೩),

ಇಷ್ಟು ಮಾಡಿದ ಬಂಟ
ನಾ ನಿನ್ನ ವೈಷ್ಣವರ
ಪುಟ್ಟದಾಸಿಯ ಮಗನೊ
ಪರದೇಸಿಯೊ

- ಎಂಬಲ್ಲಿ ತಿರುಪತಿಯಲ್ಲಿಯ ವೈಷ್ಣವ ಭಕ್ತರ ಚಿತ್ರವು ತಕ್ಷಣ ಸುಳಿದು ಹೋಗುತ್ತದೆ ಅವರ ಜೊತೆಯಲ್ಲಿ, ಕನಕದಾಸರ ಜೀವನ ಚಿತ್ರವು ಎಷ್ಟು ಹಾಸುಹೊಕ್ಕಾಗಿ ಹೆಣೆದುಕೊಂಡಿರುವುದೂ ಕೂಡ ಗಮ್ಯವಾಗುತ್ತದೆ

೧೮ (ಹಾಡು ೪೫),

ಬಂಟನಾಗಿ ಬಾಗಿಲ ಕಾಯ್ವೆ ಹರಿ ವೈ-
ಕುಂಠದ ಸೊಂಪಿನ ದಾಸರ ಮನೆಯ

ಶ್ರೀಹರಿಯ ಸಮ್ಮುಖದ
ಜಗದೊಳು ಇರುವೆ
ಶ್ರೀ ಲೋಲನ ಕೊಂಡಾಡಿ ಪಾಡುವೆನು

ಶೇಷಪ್ರಸಾದವ ಉಂಡುಕೊಂಡಿರುವೆ
ಶೇಷಗಿರಿ ಕಾಗಿನೆಲೆಯಾದಿ ಕೇಶವನ
ದಾಸರ ದಾಸರ ದಾಸರ ಮನೆಗಳ

- ಈ ಕೀರ್ತನೆಯನ್ನು ತಿರುಪತಿಯಲ್ಲಿಯೇ ಶ್ರೀನಿವಾಸನ ಸಾಕ್ಷಾತ್ತಿನಲ್ಲಿಯೇ ಬರೆದಿರಬಹುದಾಗಿದೆ ಆ ಲಕ್ಷಣಗಳೇ ಇಲ್ಲಿ ಹೊಡೆದೆದ್ದು ಕಾಣುತ್ತವೆ

೧೯ (ಹಾಡು ೫೪),

ಕ್ಷೀರದೊಳದ್ದು ನೀರೊಳಗದ್ದು ಗೋವಿಂದ
ಹೇರನೊಪ್ಪಿಸಿದ ಮೇಲೆ ಸುಂಕವೇತಕೆ ದೇವ?

- ಇಲ್ಲಿಯ 'ಗೋವಿಂದಾ' ಎಂಬ ಉದ್ಗಾರದಲ್ಲಿ ಕನಕದಾಸರ ಸರ್ವಸಮರ್ಪಣಾಭಾವದ ತರಂಗಗಳು ತುಂಬಿವೆ ಆ ತರಂಗಗಳಲ್ಲಿ ಭಾವಾತ್ಮವಾದಾಗ ಶ್ರೀನಿವಾಸನ ಪ್ರಸನ್ನ ಮೂರುತಿಯು ಗೋಚರವಾಗುತ್ತದೆ ಇಂತಹ ಅನುಭವವನ್ನು ನೀಡುವ ಈ ಕೀರ್ತನೆಯು ಶ್ರೀನಿವಾಸನ ನೆಲೆಗೆ ಹಿಡಿದ ಕನ್ನಡಿಯಾಗಿದೆ

೨೦ (ಹಾಡು ೫೬),

ಗೋವಿಂದ ಹರಿಗೋವಿಂದ
ಗೋವಿಂದ ಕೇಶವ ಕೃಷ್ಣಗೋವಿಂದ

- ಇಲ್ಲಿ ಮೂಡಿಬಂದಿರುವ ದಶಾವತಾರದ ವರ್ಣನೆಯಲ್ಲಿ 'ಗೋವಿಂದ' ಸ್ವರೂಪವು ಸೂಕ್ಷ್ಮವಾಗಿ ನೆಲೆಯಾಗಿರುವುದನ್ನು ಕಾಣಬಹುದು ಈ ಗೋವಿಂದ ಸ್ವರೂಪದೊಳಗೆಲ್ಲ ಶ್ರೀನಿವಾಸನ ಸೊಲ್ಲು ಅದೇ ಕನಕದಾಸರ ಗೆಲ್ಲು

೨೧ (ಹಾಡು ೫೭),

ಜಗದಂತರ್ಯಾಮಿ ಇಂತೆಂದು ನಿನ್ನ
ನಿಗಮ ಸಾರುವ ಮಾತು
ಪುಸಿಯೆ ಕೋನೇರಿ ತಿಮ್ಮ?
ಯಂತ್ರವಾಹಕನೆಂಬ ಬಿರುದು
ಸಲುವುದು ನಿನಗೆ
ಕಂತುಪಿತ ಕಾಗಿನೆಲೆಯಾದಿ ಕೇಶವನೆ

- ತಿರುಪತಿಯ ವೆಂಕಪ್ಪನನ್ನು ತಿರುಪತಿಯ ತಿಮ್ಮಪ್ಪನೆಂದು ಕರೆಯುವುದು ವಾಡಿಕೆ ಆತನಿಗೆ 'ಯಂತ್ರವಾಹಕ' ಎಂಬ ಬಿರುದೂ ಕೂಡ ಈ ಕೀರ್ತನೆಯ ಈ ಪಾದಗಳು ಜನವಾಡಿಕೆಯ ಮಾತಿಗೆ ಪುಷ್ಟಿನೀಡಿವೆ

೨೨ (ಹಾಡು ೫೯),

ಉರಗನಂದದಿ ಮಂಚವಾಗುವನು ನಾನಲ್ಲ
ಗರುಡನಂದದಿ ದೆನ್ನಕೊಡುವನಲ್ಲ
ಸಿರಿದರನೆ ಕಾಗಿನೆಲೆಯಾದಿ ಕೇಶವ ನಿನ್ನ
ಪರಮ ಡಿಂಗರಿಗರ ಪಂಕ್ತಿ ಸೇರಿಸೋ ಎನ್ನ

- ಇಲ್ಲಿ ಉಲ್ಲೇಖಿತವಾಗಿರುವ, "ಉರಗನಂದದಿ ಮಂಚ", "ಗರುಡ ನಂದದಿ ಬೆನ್ನು" ತಿರುಪತಿಯ ಬೆಟ್ಟಗಳ ಭೂ ಲಕ್ಷಣವನ್ನು ನೆನಪಿಗೆ ತಂದುಕೊಡುತ್ತವೆ ಅಲ್ಲದೆ, "ಡಿಂಗರಿಗರ ಪಂಕ್ತಿ" ಎಂಬಲ್ಲಿ ಶ್ರೀನಿವಾಸನಿಗೆ ಪ್ರಿಯವಾದ ದಾಸಪ್ರವೃತ್ತಿಯ ಅಂತರಾಳವನ್ನು ತೆರೆದಿಡುವ ಪ್ರಯತ್ನವನ್ನು ಕಾಣಬಹುದು

೨೩. (ಹಾಡು ೬೫),

ಈಶ ನಿನ್ನ ಚರಣ ಭಜನೆ
ಆಶೆಯಿಂದ ಮಾಡುವೆನು
ದೋಷರಾಶಿ ನಾಶಮಾಡು ಶ್ರೀಶ ಕೇಶವ

ಹಿಂದನೇಕಯೋನಿಗಳಲಿ
ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸು
ತಂದೆ ಗೋವಿಂದಾ

- ಈ ೨೪ ಕೇಶವ ನಾರಾಯಣ ಕೀರ್ತನೆಯು ಹರಿಭಕ್ತರೆಲ್ಲರ ನಾಲಗೆಯ ಮೇಲೆ ಶ್ಯಾವಗಿಯ ಫೇಣಿಯಾಗಿ ರುಚಿನೀಡುವ ಶ್ರೀಹರಿಯ ಸ್ತೋತ್ರ ಇಲ್ಲಿ, ತಂದೆ ಗೋವಿಂದಾ ಎಂಬಲ್ಲಿ ತಿರುಪತಿಯ ಶ್ರೀನಿವಾಸನನ್ನೇ ಕುರಿತು ಇರುವ ನಿವೇದನೆಯು ಘಮಘಮಿಸುತ್ತದೆ ೨೫ ನುಡಿಗಳಿರುವ ಈ ಇಡಿಯಾದ ಕೀರ್ತನೆಯು ಕನ್ನಡ ಜನಪದ ಸಂಸ್ಕೃತಿಗೆ ಹಿರಿದಾದ ಕಾಣ್ಕೆಯೆಂದು ಪರಿಗಣಿಸಬಹುದು ಭಕ್ತಿರಸಕ್ಕೆ ತಲಕಾವೇರಿ ಎನ್ನಬಹುದು

೨೪ (ಹಾಡು ೬೬),

ಮಂದರೋದ್ಧರ ಮಧುಸೂದನ
ಮಾಧವ ಗೋ
ವಿಂದ ರಕ್ಷಿಸು ಬಾಡದಾದಿ ಕೇಶವರಾಮ

- ಎಂಬಲ್ಲಿ 'ಗೋವಿಂದ'ನ ಉದ್ಗಾರದ ಅಂತರ್ಯದಲ್ಲಿ ಶ್ರೀನಿವಾಸನ ಬಗ್ಗೆ ಕನಕದಾಸರಿಗಿರುವ ಆರ್ತಭಕ್ತಿಯ ನೆಲೆಯನ್ನು ಬಿಂಬಿಸಿದೆ.

೨೫ (ಹಾಡು ೮೫),

ಈಡಯ್ಯ ಭವಭಯದ ಪಾತಕಂಗಳ ದಾನ-
ವಾಡಗುಡ್ಡದ ತಿರುಮಲೇಶ ಸರ್ವೇಶ
ಇಂತು ದಶಾವತಾರಗಳ ನೆತ್ತಿ ರಕ್ಕಸರ
ಸಂತತಿಯ ನೊರಸಿ ಭೂಭಾರವಿಳುಹಿ
ಕಂತುಪಿತ ತಿರುವೆಂಗಳೇಶ
ತಿರುಮಲೆಯೊಳಗೆ
ಚಿಂತಿಸುವ ಭಕ್ತರನು ಪಾಲಿಸುತಲಿ
ದಂತಿರಾಜನ ಪೊರೆದು ದಾನವಾಡಿಗೆ ಬಂದು
ನಿಂತಾದಿಕೇಶವನೆ ಶರಣೆಂದೆನು

ಕನಕದಾಸರಿಗೆ ಎಲ್ಲಿದ್ದರಲ್ಲಿ ತಿರುಪತಿಯ ಶ್ರೀನಿವಾಸನು ನೆನಪಿಗೆ ಬರುತ್ತಾನೆ ಮತ್ತು ಆ ಶ್ರೀನಿವಾಸನೇ ದಶಾವತಾರಕ್ಕೆ ಕಾರಣೀಭೂತನೆಂಬುವುದನ್ನು ಎಂದೂ ಮರೆಯುವುದಿಲ್ಲ ಇಲ್ಲಿ ಬರುವ ತಿರುವೆಂಗಳೇಶ, ತಿರುಮಲೇಶ - ಮೊದಲಾದ ಪದ ಪುಂಜಗಳಲ್ಲಿ ಶ್ರೀನಿವಾಸನ ಸ್ವರೂಪವು ಹಾಸು ಹೊಕ್ಕಾಗಿರುವುದಲ್ಲದೆ, ದಶಾವತಾರವನ್ನು ಬಣ್ಣಿಸುವ ೧೧ ನುಡಿಗಳ ಈ ಕೀರ್ತನೆಯಲ್ಲಿ ಶ್ರೀನಿವಾಸನೇ ಬೇರೆ ಬೇರೆ ಉಡುಗೆಗಳನ್ನು ತೊಟ್ಟು ನಿಂತಿರುವುದನ್ನು ಕನಕದಾಸರು ಮನದಟ್ಟು ಮಾಡಿಕೊಂಡು ತಾವು ಹಾಡಿಪಾಡಿ, ಎಲ್ಲರೂ ಅದೇ ಕಣ್ಣಿನಿಂದ ನೋಡಿ ತಣಿಯಲು ಅನುವು ಮಾಡಿಕೊಟ್ಟಿದ್ದಾರೆ

೨೬. (ಹಾಡು : ೮೮),

ಗೋವಿಂದ ಸಲಹೆನ್ನನು - ಸದಾನಂದ
ಗೋವಿಂದ ಸಲಹೆನ್ನನು

ಎಂದು ಮೊರೆಯಿಡುವ ಕೀರ್ತನೆಯ ತುಂಬೆಲ್ಲ 'ಗೋವಿಂದ'ನಾದವು ತುಮ್ ತುಮ್ ತುಂಬಿ ತುಳುಕಿದೆ. ಈ ನಾದದಲ್ಲಿ ತನ್ಮಯರಾದವರೆಲ್ಲ, ಕನಕದಾಸರ ಕೃಪೆಯಿಂದ, ತಿರುಪತಿಯ ಶ್ರೀನಿವಾಸನು ತಮ್ಮ ಮುಂದೆಯೇ ಕುಣಿಯುವುದನ್ನು ಅನುಭವಿಸಲು ಸಾಧ್ಯ ಇಂಥ ಅಭೂತಪೂರ್ವ ಆನಂದದ ನಿಧಿಯನ್ನು ಭೂವೈಕುಂಠಪುರದಲ್ಲಿರುವ ಗೋವಿಂದನನ್ನು ಸಂಪೂರ್ಣ ನಂಬಿದರೆ ಸಾಕು, ಆತನು ನಿಸ್ಸಂಕೋಚವಾಗಿ ಕನಕದಾಸರಿಗೆ ನೀಡಿದಂತೆ ಎಲ್ಲರಿಗೂ ನೀಡಿ ಗೌರವಿಸುವನು

೨೭ (ಹಾಡು ೯೦),

"ಮಂಗಳಂ ಗಿರಿವಾಸನೆ"

- ಎಂದು ಮುಗಿಯುವ ೧೫ ನುಡಿಗಳುಳ್ಳ ಕೀರ್ತನೆಯಲ್ಲಿ, ದ್ರೌಪದಿಗೆ ಅಕ್ಷಯಾಂಬರವನ್ನು ನೀಡಿದ ಕೃಷ್ಣನ ಅಂಶವೇ ತಿರುಪತಿಯ ಮಂಗಳ ಗಿರಿವಾಸನಾದ ಶ್ರೀನಿವಾಸನೆಂಬುದನ್ನು ಕನಕದಾಸರು ಗಟ್ಟಿಯಾಗಿ ಬಿಂಬಿಸಿದ್ದಾರೆ ಇದು ಅವರ ಮತ್ತು ಶ್ರೀನಿವಾಸನ ಆತ್ಮೀಯ ಸಂಬಂಧವನ್ನು ತೋರಿಸುವ ಆಪ್ಯಾಯಮಾನವಾದ ರೀತಿ

೨೮ (ಹಾಡು ೯೨),

ಇಂದು ನೀ ಕರೆದು ತಾರೆ - ಬಾರದೆ ಶ್ರೀ ಗೋ
ವಿಂದ ತಾ ಮುನಿದು ಇರೆ - ವಿರಹದಲಿ ನಾ
ನೊಂದು ಸೈರಿಸಲಾರೆ - ತಂದು ನೀ ತೋರೆ

- ಎಂಬ ಪಲ್ಲವಿಯೊಡನೆ ಆರಂಭವಾಗುವ ಕೀರ್ತನೆಯು ಭಾಗವತದ ಘಟನಾವಳಿಗಳ ಹಾಗು ದಶಾವತಾರ ಮಹಿಮೆಗಳ ಸೊಗಡಿನಲ್ಲಿ, 'ಗೋವಿಂದಾ' ಎಂದು ಮೊರೆಯಿಡುತ್ತ ಶ್ರೀನಿವಾಸನನ್ನು ಮಧುರಭಕ್ತಿಯಿಂದ ಪಡೆದುಕೊಳ್ಳುವ ಶೈಲಿಗೆ ಕನಕದಾಸರನ್ನು ಮಾರುಹೋಗಿರುವುದನ್ನು ತಿಳಿಸಿಕೊಟ್ಟರೆ ಈ ಕೀರ್ತನೆಯಲ್ಲಿ ಮಧುರ ಭಕ್ತಿ ತರಂಗಗಳು ತುಂಬಿ ತುಳುಕಿವೆ





೨೯ (ಹಾಡು ೧೩೮),

ತೀರ್ಥವ ಪಿಡಿದವರು
ತಿರುನಾಮಧಾರಿಗಳೆ
ಜನ್ಮಸಾರ್ಥಕವಿರದವರು
ಭಾಗವತರಹುದೆ?
ಪಟ್ಟೆನಾಮವನಿಟ್ಟು
ಪಾತ್ರೆ ಕೈಯಲಿ ಪಿಡಿದು
ಗುಟ್ಟಿನಲಿ ಜಪಿಸುವ
ಗುರು ತರಿಯದೆ
ಕೆಟ್ಟ ಕೂಗನೆ ಕೂಗಿ
ಹೊಟ್ಟೆಯನು ಹೊರೆವಂಥ
ಪೊಟ್ಟೆಗುಡುಮಗಳೆಲ್ಲ
ಪರಮ ವೈಷ್ಣವರೆ?

- ಇಲ್ಲಿ ತಿರುಪತಿಯಲ್ಲಿ ಬಂದು ಸೇರಿದ ಭಕ್ತರನ್ನು ಗುರಿಮಾಡಿ, 'ಉದರ ವೈರಾಗ್ಯಕೆ ಇಂಥ ನೋಗು ಸರಿಯಲ್ಲವೆಂದು ಚಿತ್ರಿಸುವ, ಕನಕದಾಸರ ಈ ನುಡಿಗಳ ಚಾವಟಿಯ ಏಟುಗಳಲ್ಲಿ ಖಡಾಖಂಡಿತವಾದ ಸ್ಪಷ್ಟ ಸತ್ಯದ ಚಿತ್ರವಿದೆ ಮುಗ್ಧ ಜನರು ಇಂಥವರ ನಡದಾಟವನ್ನು ನೋಡಿ ಬೆರಗಾಗಬಾರದು ಮತ್ತು ಮೋಸ ಹೋಗಬಾರದೆಂಬ ಕಳಕಳಿಯ ಎಚ್ಚರಿಕೆಯ ಸುಳಿಯನ್ನೂ ಇಲ್ಲಿ ಕಾಣಬಹುದಾಗಿದೆ.

೩೦ (ಹಾಡು ೧೫೫),

ಲಟಪಟ ನಾನಟಿಯಾಡುವೆನಲ್ಲ
ವಿರಲನ ನಾಮ ಮರತು ಪೋದೆನಲ್ಲ



ಶೇಷಗಿರಿಯ ಮೇಲೆ ಸವುತೆಯ ಬಿತ್ತಿ
ದೇವಗಿರಿಯ ಮೇಲೆ ಅವತಾರ ವಿಕ್ಕೆ
ಹಾಳೂರಿನೊಳಗೊಬ್ಬ ಕುಂಬಾರ ಸತ್ತ
ಗೋಕರ್ಣದೊಳಗೊಬ್ಬ ಪರದೇಸಿ ಸತ್ತ

- ಇದು ಕನಕದಾಸರ ಮುಂಡಿಗೆಯ ಮಾದರಿ ಇಲ್ಲಿ ಶೇಷಗಿರಿ ಎಂಬುದು ತಿರುಪತಿಯನ್ನು ಸೂಚಿಸುವ ಪದ ಎಂದರೆ ಶ್ರೀನಿವಾಸನ ಸುಳಿವು ನೀಡುವ ಮಾತು ಆದರೆ ಮುಂಡಿಗೆಗಳನ್ನು ಇಡಿಯಾಗಿ ಅರ್ಥೈಸುವ ಕಾರ್ಯವು ಇನ್ನೂ ಬಹಳಷ್ಟು ನಡೆಯದೇಕಾಗಿದೆ

ಈ ಮೇಲಿನ ನಿದರ್ಶನಗಳು, ಕನಕದಾಸರು ರಚನೆಮಾಡಿರುವ ಬೇರೆ ಬೇರೆ ಸಂದರ್ಭಗಳಲ್ಲಿ, ಬೇರೆ ಬೇರೆ ಸ್ಥಳಗಳಲ್ಲಿಯ ಕೀರ್ತನೆಗಳಲ್ಲಿ ಶ್ರೀನಿವಾಸನ ಭಾವನ್ನು ಕಾಣಲು ಪಾರದರ್ಶಿಕತ್ವವನ್ನು ಒದಗಿಸುತ್ತವೆ ಇಂತಹವುಗಳಲ್ಲದೆ, ಇನ್ನೂ ಅನೇಕ ಕೀರ್ತನೆಗಳನ್ನು ಈ ಕನಕದಾಸರು ತಿರುಪತಿ ಕ್ಷೇತ್ರದಲ್ಲಿದ್ದುಕೊಂಡೇ ಆ ಪರಿಸರದಲ್ಲಿಯೇ ರಚನೆ ಮಾಡಿರಲು ಸಾಧ್ಯವಿದೆ ಅಂತಹ ಕೀರ್ತನೆಗಳ ರಚನೆಯು ತಿರುಪತಿಯಲ್ಲಿಯೇ ನಡೆದು ಅಲ್ಲಿಯೇ ಇರುವ ಜನಪರ ಶ್ರೀನಿವಾಸನಿಗೆ ಸಮರ್ಪಿತವಾದವುಗಳು ಅಂತಹ ಕೆಲವನ್ನು ಇಲ್ಲಿ ನಿದರ್ಶನಕ್ಕೆಂದು ಪ್ರಸ್ತಾಪಿಸಲಾಗಿದೆ

೧ (ಹಾಡು ೧೬),

ಗೋವಿಂದ ಗೋವಿಂದ
ಎನ್ನಲರಿಯದ ವೃಥಾ
ನೋವಿಂದ ಭಂಗವು
ಪಡುವುದು ಚಿತವೆ?

- ಎಂದು ಆರಂಭವಾಗುವ ಕೀರ್ತನೆಯು, "ಆದಿಕೇಶವನ ನಾಮ ಒಂದೇ ವೈಕುಂಠವೆ ನಿಪ್ಪುದಯ್ಯಾ" ಎಂಬ ಮಾತಿನಲ್ಲಿ ಪರ್ಯಾವಸಾನ ಹೊಂದುತ್ತದೆ ಈ ಇಡೀ ಕೀರ್ತನೆಯು, "ಶ್ರೀನಿವಾಸನ ನಾಮಸ್ಮರಣೆ"ಯ ಮಹತ್ವವನ್ನು ಎತ್ತಿ ತೋರಿಸುತ್ತವೆ ಇಲ್ಲಿಯ ಪ್ರತಿಯೊಂದು ನುಡಿಯಲ್ಲಿ ಪೌರುಷವಾದವದ ಹಿನ್ನೆಲೆಯಲ್ಲಿ ಶ್ರೀನಿವಾಸನ ನಾಮಸ್ಮರಣೆಯೊಂದು ದಿವ್ಯೌಷದಿ ಇದೊಂದೇ, ಸ್ವರೂಪದರ್ಶನದಿಂದ ವೈಕುಂಠವನ್ನು ಸಾಧ್ಯಶ್ಯಗೊಳಿಸುತ್ತದಷ್ಟೇ ಅಲ್ಲ, ಇದರ ಅತ್ಯಂತ ಶ್ರೇಷ್ಠವಾದ ಪರಿಣಾಮ ಈ ನಿಟ್ಟಿನ ಚಿಂತನಕ್ಕೆ ತಿರುಪತಿಯ ಪರಿಸರ ಅರ್ಥಾತ್ ಶ್ರೀನಿವಾಸನ ಸಾನ್ನಿಧ್ಯವು ಸತ್ವವನ್ನು ಒದಗಿಸುತ್ತದೆಂಬ ಭಾವಕ್ಕೆ ಕನಕದಾಸರ ಈ ಕೀರ್ತನೆಯು ಅರ್ಥವನ್ನು ಒದಗಿಸಿದೆ

೨ (ಹಾಡು ೬೩),

ಏನೆಂದು ಕೊಂಡಾಡಿ
ಸ್ತುತಿಸುವೆನೊ ದೇವ
ನಾನೇನು ಬಲ್ಲೆ ನಿಮ್ಮ
ಮಹಿಮೆಗಳ ಮಾಧವ

- ಎಂಬ ಪಲ್ಲವಿಯೊಡನೆ ಆರಂಭವಾಗುವ ಕನಕದಾಸರ ಈ ಕೀರ್ತನೆಯು ಆರ್ತಭಕ್ತಿಯ ಹಾಗೂ ಅನನ್ಯ ಶರಣಾಗತಿಯ ಸ್ವರೂಪವನ್ನು ಮನದಟ್ಟು ಮಾಡಿ ಕೊಡುತ್ತದೆ ಜೊತೆಗೆ ಶ್ರೀನಿವಾಸನನ್ನು ಕನಕದಾಸರು ಚೆನ್ನಾಗಿ ಅರಿತಿದ್ದಾರೆಂಬುದರ ಬಗ್ಗೆ ಸಂಪೂರ್ಣ ಕಲ್ಪನೆಯನ್ನು ಒದಗಿಸುತ್ತದೆ ಆದ್ದರಿಂದಲೇ ಶ್ರೀನಿವಾಸನ ಸಂಪೂರ್ಣ ಅನುಗ್ರಹವಾಗಬೇಕಾದರೆ ಅನನ್ಯ ಶರಣಾಗತಿಯೊಂದೇ ಸಾಧನವೆಂದು ಅವರಿಗೆ ಗೊತ್ತಿದ್ದೂ, ತಮ್ಮ ಸಖ್ಯದಲ್ಲಿಯೂ ಆತನನ್ನು ಪಡೆಯಲು ಅನನ್ಯ ಶರಣಾಗತಿಯೊಂದೇ ಯೋಗ್ಯಮಾರ್ಗವೆಂದು ಬಗೆದು ಈ ಕೀರ್ತನೆಯನ್ನು ಹಾಡಿದ್ದಾರೆ ಮತ್ತು ಇದನ್ನು ತಿರುಪತಿಯಲ್ಲಿಯೇ ಶ್ರೀನಿವಾಸನ ಸನ್ನಿಧಿಯಲ್ಲಿಯೇ ರಚನೆ ಮಾಡಿ "ತಿರುಪತಿಯ ವಾಸ ಶ್ರೀ ವೆಂಕಟೇಶ ನಿನ್ನ, ಚರಣ ಸೇವಕರ ಸೇವಕನು ನಾನು" ಎಂದು ಅದನ್ನು ಅಲ್ಲಿಯೇ ಅವನಿಗೇ ಸಮರ್ಪಿಸಿದ್ದಾರೆಂದು ಖಂಡಿತವಾಗಿ ಹೇಳಬಹುದು

೩ (ಹಾಡು ೭೯),

ಸಿರಿಮದವೆ ಮುಕುಂದ - ನಿನ್ನ
ಚರಣಸೇವಕನ ಬಿನ್ನಹ
ಪರಾಕೆಲೊ ದೇವ

- ಎಂಬ ಪಲ್ಲವಿಯೊಡನೆ ಆರಂಭವಾಗುವ ಈ ನಿಂದಾಸ್ತುತಿಯ ಕೀರ್ತನೆಯು ಶ್ರೀನಿವಾಸ ಮತ್ತು ಕನಕದಾಸರ ಸಖ್ಯದ ಗಾಢವಾದ ಅಂತಸ್ತನ್ನು ತೋರಿಸುತ್ತದೆ "ಶೇಷನ ಹಾಸಿಗೆ ಗರುಡ ತುರಗವು ಪೀರ, ವಾಸ ದುಡುಗೆಯು ಕೊರಳಲಿ ವೈಜಯಂತಿ, ಮಾಸಲಳಿಯದ ಪುಷ್ಪಮಾಲೆ ಧರಿಸಿ ಜಗದೀಶನೆಂಬ ಬಿರುದ ಪೊಗಳಿಸಿಕೊಳುತಿಪ್ಪೆ" - ಎಂದು ಶ್ರೀನಿವಾಸನ ಹೆಗ್ಗರಿಮೆಯನ್ನು ಎತ್ತಿ ತೋರಿಸುತ್ತ ಕೊನೆಯಲ್ಲಿ, "ಭಕ್ತವತ್ಸಲನೆಂಬ ಬಿರುದು ಬೇಕಾದಡೆ, ಶಕುತ ಸುಮ್ಮನೆ ಕಾಯೊ ಸುಲಭದಿಂದ, ಸುಕೃತ ಶರಣರು ನಿಮ್ಮ ನೆನೆವರ್ಕೆ ಶೇಷಗಿರಿ, ಪ್ರಕಟವಾಸಾದಿ ಕೇಶವ ವೆಂಕಟೇಶ" ಎಂದು ಸಚ್ಚಾರಿತ್ರದ ಆತ್ಮ ವಿಶ್ವಾಸದಿಂದ ವೆಂಕಟೇಶ ಅರ್ಥಾತ್ ಶ್ರೀನಿವಾಸನನ್ನು ಕಾರ್ಯೋನ್ಮುಖನಾಗಿಸಿ ಭಕ್ತರಿಗೆ ಆತ್ಮಬಲವನ್ನು ನೀಡಿ ಪೊರೆಯಲು ಮುಂದಾಗಿ ಆತನು ಬರುವಂತೆ ಕೋರುವ ರೀತಿಯು ಭಕ್ತ ಪರಮಾತ್ಮರ ವಿನಯಾದರಗಳಿಂದ ಕೂಡಿದ ಸಗಾಢತೆಯ ಸ್ನೇಹದ ಹೆಗ್ಗುರುತು ಈ ರಚನೆಯನ್ನೂ ತಿರುಪತಿಯ ಕ್ಷೇತ್ರದಲ್ಲಿದ್ದಾಗಲೇ ಕನಕದಾಸರು ಕೈಕೊಂಡರೆಂದು ಆಂತರಿಕ ಪ್ರಮಾಣಗಳಿಂದ ಗುರುತಿಸಬಹುದಾಗಿದೆ

೪ (ಹಾಡು ೭೨),

ಕಣಿಯ ಹೇಳ ಬಂದೆ
ನಾನು ತಿಳಿಯಲಿಲ್ಲವೆ?

- ಎಂದು ಪ್ರಾರಂಭವಾಗುವ ಈ ಮಹಾತ್ಮಸ್ಮರಣೆಯ ಕೀರ್ತನೆಯು ಒಂದೇ ಕ್ಷಣಕ್ಕೆ ಶ್ರೀನಿವಾಸಕಲ್ಯಾಣದಲ್ಲಿಯ ಕೊರವಂಜಿಯ ಸನ್ನಿವೇಶವನ್ನು ನೆನಪಿಗೆ ತಂದು ಕೊಡುತ್ತದೆ ಏಕೆಂದರೆ ಕಣಿಹೇಳಿಯೇ ಪದ್ಮಾವತಿಯನ್ನು ಶ್ರೀನಿವಾಸ ಗಿಟ್ಟಿಸಿದ್ದು. ಅದಿರಲಿ, ಮತ್ತೆ ಕೊನೆಯ ನುಡಿಯಲ್ಲಿ, "ಪೊಡವಿಗಧಿಕ ಕಾಗಿನೆಲೆಯ ಒಡೆಯ ವೆಂಕಟೇಶ ನಿನ್ನ ಅಡಿಗಳಿಂದ ಸಲಹೊ ಎನ್ನ ಕನಕ ನೊಡೆಯನೆ, ಒಡೆಯ ಬಾಡದಾದಿ ಕೇಶವನಡಿಗಳನ್ನು ಸ್ಮರಿಸಿ ಇಂದ, ದೊಡ್ಡ ದೇವರ ಮೊರೆಯ ಬಿದ್ದರೆ ಮುಕ್ತಿ

26 ನೇ ಪುಟ ನೋಡಿ

# ವೇದಾಂತ ದೇಶಿಕರು

- ಕೆ. ಎಸ್. ಶ್ರೀವತ್ಸ

## ನ್ಯಾಸ ವಿಂಶತಿ

ದೇಶಿಕರು ಶರಣಾಗತಿ ಶಾಸ್ತ್ರದ ಬಗ್ಗೆ ರಚಿಸಿರುವ ಸ್ತೋತ್ರ ಸಾಹಿತ್ಯದಲ್ಲಿ ನ್ಯಾಸ ವಿಂಶತಿಯೂ ಒಂದು ನ್ಯಾಸದಶ ಕ, ನ್ಯಾಸ ತಿಲಕ, ಶರಣಾಗತಿ ದೀಪಿಕಗಳು ಇತರ ಸ್ತೋತ್ರಗಳು ಹೆಸರೇ ತಿಳಿಸುವಂತೆ ೨೦ ಶ್ಲೋಕಗಳ ಸ್ತೋತ್ರ ಇದು ಇದರಲ್ಲಿ ಇತರ ಶರಣಾಗತಿ ಗ್ರಂಥಗಳಲ್ಲಿ ವಿವರಿಸದೇ ಇರುವ ಕೆಲವು ಸೂಕ್ಷ್ಮ ವಿಷಯಗಳನ್ನು ಪ್ರಸ್ತಾಪಿಸಲಾಗಿದೆ ಈ ಸ್ತೋತ್ರಕ್ಕೆ ಸ್ವಾಮಿ ದೇಶಿಕರೇ ಸ್ವತಃ ಭಾಷ್ಯವನ್ನು ಶಿಷ್ಯರ ಕೋರಿಕೆಯ ಮೇರೆಗ ಅನುಗ್ರಹಿಸಿದ್ದಾರೆ ಈ ರೀತಿ ಬರದಿರುವುದು ಇದು ಒಂದು ಸ್ತೋತ್ರಕ್ಕೆ ಮಾತ್ರ. ಸ್ವಾಮಿ ದೇಶಿಕರು ಪ್ರಪತ್ತಿ ಶಾಸ್ತ್ರದ ಪ್ರಚಾರಕ್ಕಾಗಿಯೇ ಅವತರಿಸಿದ ಮಹಾನುಭಾವರೆಂದು ಪ್ರಸಿದ್ಧಿ ಹೊಂದಿರುವುದು ಅವರ ಕೃತಿಗಳಲ್ಲಿ ಸುವ್ಯಕ್ತವಾಗಿದ ಪ್ರಪತ್ತಿಯ ಮಹಿಮೆಯ ಬಗ್ಗೆ ಯಾವ ಸಣ್ಣ ಟೀಕೆಯೇ ಆಗಲಿ, ಅದನ್ನೂ ಸಹ ಸಮರ್ಥವಾಗಿ ಖಂಡಿಸಿ, ಪ್ರಪತ್ತಿ ಶಾಸ್ತ್ರವು ದೋಷಮುಕ್ತವೆಂಬುದನ್ನು ನಿಪುಣತರವಾಗಿ ಪ್ರತಿಪಾದಿಸಿದ್ದಾರೆ

ಎಲ್ಲಾ ೨೨ ಶ್ಲೋಕಗಳನ್ನು ಸ್ರಗ್ಧರಾ ವೃತ್ತದಲ್ಲಿ ರಚಿಸಿದ್ದು ಸ್ತೋತ್ರದ ಪಠನವೇ ಮನಸ್ಸಿಗೆ ಸಂತೋಷವನ್ನು ನೀಡುತ್ತದ ಮೊದಲನೆಯ ಮತ್ತು ಎರಡನೆಯ ಶ್ಲೋಕಗಳು ಒಬ್ಬ ಆದರ್ಶ ಆಚಾರ್ಯನ ಗುಣಗಳ ಬಗ್ಗೆಯೂ, ಮೂರನೇಯ ಶ್ಲೋಕವು ಶಿಷ್ಯನ ಲಕ್ಷಣಗಳ ಬಗ್ಗೆಯೂ, ೪ ರಿಂದ ೨೦ ಶ್ಲೋಕದವರೆಗ ಪ್ರಪತ್ತಿಯ ಮಹಿಮೆ, ಪ್ರಪತ್ತಿಯು ಹೇಗೆ ಮೋಕ್ಷಕ್ಕೆ ಉಪಾಯವಾಗಿದೆ ಹಾಗೂ ಪ್ರಪತ್ತಿಯ ಬಗ್ಗೆ ಇತರರು ಸಾಮಾನ್ಯವಾಗಿ ಎತ್ತುವ ಆಕ್ಷೇಪಗಳು, ಸಮಾಧಾನ ಇತ್ಯಾದಿಗಳ ನಿರೂಪಣೆ ಇದ್ದು, ೨೧ ನೇ ಶ್ಲೋಕದಲ್ಲಿ ದೇಶಿಕರ ಕರ್ತೃತ್ವದ ಬಗ್ಗೆ ಹೇಳಿ ಕೊನೆಯದಾದ ೨೨ ನೇ ಶ್ಲೋಕದಲ್ಲಿ ತಾವೇ ಸ್ವತಃ ಹಿಂದೆ ಹೇಳಿದ ಮಾರ್ಗದಲ್ಲಿ ಪ್ರಪತ್ತಿಯನ್ನು ಅನುಷ್ಠಿಸಿದ್ದಾರೆ

ಆಚಾರ್ಯನಲ್ಲಿ ೧೪ ಗುಣಗಳನ್ನು ಹೇಳಿದ್ದಾರೆ.

೧) ಪೂರ್ವಾಚಾರ್ಯರುಗಳಿಂದ ಉಪದೇಶಿಸಲ್ಪಟ್ಟ ಸಂಪ್ರದಾಯದಲ್ಲಿ ನಿಷ್ಠೆ ಹಾಗೂ ವಿಶ್ವಾಸವನ್ನು ಹೊಂದಿರುವವನಾಗಿರಬೇಕು

೨) ಉತ್ತಮ ಹಾಗೂ ಖಚಿತ ಜ್ಞಾನ ಹೊಂದಿರಬೇಕು

೩) ವಾಕ್ಯಗಳಲ್ಲಿ ಕಳಂಕ ರಹಿತನಾಗಿರಬೇಕು

೪) ವೇದಾಧ್ಯಯನ ಸಂಪನ್ನನಾಗಿರಬೇಕು

೫) ಭಗವದ್ಭಕ್ತನಾಗಿರಬೇಕು

೬) ಸಾತ್ವಿಕ ಗುಣಗಳನ್ನು ಹೊಂದಿರಬೇಕು

೭) ಸತ್ಯವನ್ನೇ ನುಡಿಯಬೇಕು

೮) ಸನ್ನಡತೆಯುಳ್ಳವನಾಗಿರಬೇಕು

೯) ಅಹಂಕಾರ, ಮತ್ಸರ ಮುಂತಾದವುಗಳಿಂದ ವಿಮುಕ್ತನಾಗಿರಬೇಕು

೧೦) ಇಂದ್ರಿಯಗಳನ್ನು ನಿಗ್ರಹಿಸಿರಬೇಕು

೧೧) ಇತರರಿಗೆ ಜೀವನ ಪರ್ಯಂತ ಬಂಧುವಾಗಿರಬೇಕು

೧೨) ದಯೆ ಮತ್ತು ಔದಾರ್ಯ ಗುಣ ಪೂರ್ಣನಾಗಿರಬೇಕು

೧೩) ಇತರರ ದೋಷಗಳನ್ನು ತೋರಿಸಿ ಅವರನ್ನು ತಿದ್ದಬೇಕು

೧೪) ತನಗೂ ಹಾಗೂ ಇತರರಿಗೂ ಹಿತವಾಗುವಂತೆ ಯಾವಾಗಲೂ ನಡೆಯಬೇಕು

ಶಿಷ್ಯನ ಲಕ್ಷಣಗಳನ್ನು ಈ ಕೆಳಕಂಡಂತೆ ನಿರೂಪಿಸಿದ್ದಾರೆ -

೧) ಸದ್ಬುದ್ಧಿಯನ್ನು ಹೊಂದಿರಬೇಕು

೨) ಸಾಧುಗಳನ್ನು ಸೇವಿಸಿರಬೇಕು

೩) ಒಳ್ಳೆಯ ನಡತೆಯುಳ್ಳವನಾಗಿರಬೇಕು

೪) ತತ್ವವನ್ನು ತಿಳಿಯುವ ಅಭಿಲಾಷೆ ಇರಬೇಕು



೫) ಗುರುವಿಗೆ ಸೇವೆಯನ್ನು ಮಾಡುವವನಾಗಿರಬೇಕು

೬) ಒಣ ಜಂಭವನ್ನು ಬಿಟ್ಟವನಾಗಿರಬೇಕು

೭) ಗುರುವನ್ನು ನಮಸ್ಕರಿಸಬೇಕು

೮) ಗುರುವಿನ ಸಮಯವನ್ನು ತಿಳಿದು ಪ್ರಶ್ನೆ ಮಾಡಬೇಕು

೯) ಶಾಂತನಾಗಿರಬೇಕು

೧೦)ದಾಂತನಾಗಿರಬೇಕು

೧೧) ಮತ್ಸರ ರಹಿತನಾಗಿರಬೇಕು

೧೨) ಆಚಾರ್ಯನಲ್ಲಿ ಶರಣಾಗತಿಯನ್ನು ಅನುಷ್ಠಾಪಿಸಿರಬೇಕು

೧೩) ಶಾಸ್ತ್ರಗಳಲ್ಲಿ ವಿಶ್ವಾಸ ಶಾಲಿಯಾಗಿರಬೇಕು

೧೪) ಆಚಾರ್ಯನಿಂದ ಪರೀಕ್ಷಿಸಲ್ಪಟ್ಟಿರಬೇಕು

೧೫) ಆಚಾರ್ಯನಿಗೆ ಭೃತ್ಯನಾಗಿರಬೇಕು

ಸ್ತೋತ್ರದಲ್ಲಿ ಶರಣಾಗತಿಯ ಅಂಶಗಳಾದ ಅನುಕೂಲಸ್ಯ ಸಂಕಲ್ಪ, ಪ್ರಾತಿಕೂಲಸ್ಯ ವರ್ಜನ, ಗೋಪ್ತೃತ್ವವರಣ, ಕಾರ್ಪಣ್ಯ ಮಹಾವಿಶ್ವಾಸ, ಆತ್ಮನಿವೇದನ ಇವುಗಳನ್ನು ವಿಶದವಾಗಿ ವಿವರಿಸಿರುವುದಲ್ಲದೆ ಪ್ರಪತ್ತಿಯ ಬಗ್ಗೆ ಎದ್ದಿರುವ ಕೆಲವು ಆಕ್ಷೇಪಗಳನ್ನು ಪರಿಹರಿಸಿದ್ದಾರೆ ಮುಖ್ಯವಾಗಿ ಪ್ರಪತ್ತಿಯು ಬ್ರಹ್ಮ ವಿದ್ಯೆಯಲ್ಲಿ ಸೇರಿದೆಯೆ ಅಥವಾ ಇಲ್ಲವೇ ಎಂಬ ಆಕ್ಷೇಪಕ್ಕೆ 'ನಾನಾ ಶಬ್ದಾದಿ ಭೇದಾದಿತಿ' ಎಂಬ ಶ್ಲೋಕದಲ್ಲಿ ಅರ್ಥವತ್ತಾದ ವಾದವನ್ನು ಮುಂದಿಟ್ಟಿದ್ದಾರೆ ಉಪನಿಷತ್ತುಗಳಲ್ಲಿ ಪ್ರೋಕ್ತವಾಗಿರುವ ಅನೇಕ ಮೋಕ್ಷ ವಿದ್ಯೆಗಳಾದ ಮಧು ವಿದ್ಯೆ ದಹರವಿದ್ಯೆ ಮುಂತಾದವುಗಳಂತೆ ಭಕ್ತಿ ಮತ್ತು ಪ್ರಪತ್ತಿಗಳೂ ಬ್ರಹ್ಮವಿದ್ಯೆಗಳೇ

ಭಕ್ತಿ ಯೋಗವು ವಿಳಂಬವನ್ನು ಸಹಿಸುವವನಿಗೂ, ಪ್ರಪತ್ತಿಯು ವಿಳಂಬವನ್ನು ಸಹಿಸದವನಿಗೂ ಅನುಷ್ಠಿಸಲು ಯೋಗ್ಯವಾಗಿರುವ ವಿದ್ಯೆಗಳು ಉಪನಿಷತ್ತುಗಳೂ ಹಾಗೂ ಬ್ರಹ್ಮಸೂತ್ರಗಳಲ್ಲಿಯೂ ಸಹ ನ್ಯಾಸವಿದ್ಯೆಯನ್ನು ಹೇಳಲಾಗಿದೆ ಇದಕ್ಕೆ ವಿಪುಲವಾದ ಪ್ರಮಾಣಗಳಿವೆ ಆದ್ದರಿಂದ ನ್ಯಾಸ ವಿದ್ಯೆಯ ಮಹತ್ವದ ಬಗ್ಗೆ ಯಾವ ಆಕ್ಷೇಪಣೆಯೂ ಸಲ್ಲದು

೨೨ನೇ ಶ್ಲೋಕವಾದ ಕೊನೆಯ ಶ್ಲೋಕದಲ್ಲಿ "ಸ್ವಸ್ವತ್ವಸ್ವಾದ ಪದ್ಮೇ ವರದ ನಿಜಭರಂ ನಿರ್ಭರೋ ನಿರ್ಭಯೋಸ್ಮಿ" ಎಂದು ನ್ಯಾಸದಶಕದಲ್ಲಿ ಹೇಳಿರುವುದನ್ನೇ ಇಲ್ಲಿಯೂ ಹೇಳಿದ್ದಾರೆ ನನ್ನ ಸರ್ವಭಾರವನ್ನೂ ನಿನ್ನಲ್ಲಿ ಒಪ್ಪಿಸಿ, ನಾನು ನಿರ್ಭರನಾಗಿ, ನಿರ್ಭಯವಾಗಿ ಉಳಿದ ಕಾಲವನ್ನು ನಿನ್ನ ಕೈಂಕರ್ಯದಲ್ಲಿ ಕಳೆಯುತ್ತೇನೆ ಎಂಬ ಭಾವ ಸಂಸಾರ ಯಾತ್ರೆಯ ವಿಷಯದಲ್ಲಾಗಲೀ ಮೋಕ್ಷದ ವಿಷಯದಲ್ಲಾಗಲೀ ನನಗಿನ್ಯಾವ ಚಿಂತೆಯೂ ಇಲ್ಲ ನೀನು ಕರೆಸಿಕೊಳ್ಳುವ ಕಾಲವನ್ನು ನಿರೀಕ್ಷಿಸುತ್ತಾ ಇರುತ್ತೇನೆ - ಎಂದು ಪ್ರತಿಯೊಬ್ಬ ಪ್ರಪನ್ನನೂ ಪ್ರಪತ್ತಿಯ ಅನುಷ್ಠಾನದ ನಂತರ ಹೊಂದಬೇಕಾದ ಮಾನಸಿಕ ನೆಲೆಯನ್ನು ತಿಳಿಸಿದ್ದಾರೆ

ನ್ಯಾಸ ವಿಂಶತಿ, ಸ್ತೋತ್ರವೂ ಹೌದು, ಶಾಸ್ತ್ರ ಗ್ರಂದವೂ ಹೌದು

# ನ್ಯಾಸದಶಕ

ವೇದಾಂತ ದೇಶಿಕರು ಶರಣಾಗತಿ ತತ್ವದ ಪ್ರದಾನ ಪ್ರತಿಪಾದಕರು ಭಕ್ತಿ ಮತ್ತು ಶರಣಾಗತಿಗಳಲ್ಲಿ ಶರಣಾಗತಿಯು ಸುಲಭೋಪಾಯ, ಅಶಕ್ತರು ಹಾಗೂ ವಿಳಂಬವನ್ನು ಸಹಿಸದ ಮುಮುಕ್ಷುಗಳು ಶರಣಾಗತಿ ಮಾರ್ಗವನ್ನು ಅನುಸರಿಸಿ ಮೋಕ್ಷವನ್ನು ಪಡೆಯಬಹುದೆಂದು ಪ್ರಪತ್ತಿ ಮಾರ್ಗವು ವೇದ ವಿಹಿತವಾಗಿದ್ದು ಪೂರ್ವಾಚಾರ್ಯರುಗಳ ಮನ್ನಣೆಯನ್ನು ಪಡೆದಿದೆಯೆಂದು ಸಪ್ರಮಾಣವಾಗಿ ತಮ್ಮ ಅನೇಕ ಗ್ರಂದಗಳಲ್ಲಿ ಅದರಲ್ಲೂ ಮುಖ್ಯವಾಗಿ ಶ್ರೀಮದ್ ರಹಸ್ಯತ್ರಯಸಾರ ಗ್ರಂದದಲ್ಲಿ ನಿರೂಪಿಸಿದ್ದಾರೆ ಶರಣಾಗತಿಯ ಅಥವಾ ನ್ಯಾಸ ವಿದ್ಯೆಯ ಬಗ್ಗೆ ಮೂರು ಸ್ತೋತ್ರಗಳನ್ನೂ ಸಹ ರಚಿಸಿದ್ದು, ಅವು ಕ್ರಮವಾಗಿ ನ್ಯಾಸದಶಕ ನ್ಯಾಸ ವಿಂಶತಿ ಮತ್ತು ನ್ಯಾಸ ತಿಲಕವಾಗಿವೆ

ನ್ಯಾಸದಶಕವು ಹೆಸರೇ ಸೂಚಿಸುವಂತೆ ಹತ್ತು ಶ್ಲೋಕಗಳನ್ನು ಒಳಗೊಂಡಿದ್ದು ಶರಣಾಗತಿ ತತ್ವದ ಸಾರವನ್ನು ಎಲ್ಲರಿಗೂ ಮನದಟ್ಟು ಆಗುವಂತೆ ಸರಳ ಶ್ಲೋಕಗಳನ್ನು ಹೊಂದಿದೆ ಪ್ರತಿನಿತ್ಯವೂ ಪಠಿಸಲು ಯೋಗ್ಯವಾಗಿದ್ದು ಆರಾಧನೆಯ ಸಮಯದಲ್ಲಿ ಹೇಳುವ ಪರಿಪಾಠವಿದೆ.

ಪ್ರಥಮ ಶ್ಲೋಕದಲ್ಲಿ ಈ ರೀತಿ ಹೇಳಿದ್ದಾರೆ

ಅಹಂ ಮದ್ರಕ್ಷಣ ಭರೋ
ಮದ್ರಕ್ಷಣ ಫಲಂ ತದಾ
ನಮಮ ಶ್ರೀಪತೇ ರೇವ
ತ್ಯಾಪ್ಮಾನಂ ನಿಕ್ಷಿಪೇತ್ ಬುದಃ

ನಾನು ನನಗೆ ಸೇರಿದವನಲ್ಲ ನನ್ನ ರಕ್ಷಣೆಯ ಭಾರವೂ ನನಗೆ ಸೇರಿದ್ದಲ್ಲ ನನ್ನ ರಕ್ಷಣೆಯ ಫಲವೂ ನನಗೆ ಸೇರುವಂತಹುದಲ್ಲ ಎಲ್ಲವೂ ಆ ಭಗವಂತನಿಗೆ ಸೇರಿದ್ದು ಈ ರೀತಿ ತಿಳಿದು ಪ್ರಾಜ್ಞರು ತಮ್ಮ ಆತ್ಮವನ್ನು ಭಗವಂತನಲ್ಲಿ ಒಪ್ಪಿಸುತ್ತಾರೆ ತತ್ವ, ಹಿತ, ಪುರುಷಾರ್ಥಗಳನ್ನು ಈ ಶ್ಲೋಕದಲ್ಲಿರುವ ಮೂರು ವಾಕ್ಯಗಳಲ್ಲಿ ಅಹಂ ನಮಮ, ಮದ್ರಕ್ಷಣಂ ಭರಂ ನಮಮ, ಮದ್ರಕ್ಷಣ ಫಲಂ ನಮಮ ಎಂದು ಸ್ಪುಟವಾಗಿ ಹೇಳಿದ್ದಾರೆ

ಇತರ ಶ್ಲೋಕಗಳಲ್ಲಿ ಶರಣಾಗತಿಯ ಅಂಗಗಳಾದ, ಅನುಕೂಲ ಸಂಕಲ್ಪ, ಪ್ರಾತಿಕೂಲಸ್ಯ ವರ್ಜನಂ, ಗೋಪ್ತೃತ್ವ ವರಣಂ, ಕಾರ್ಪಣ್ಯಂ, ಮಹಾ ವಿಶ್ವಾಸಂ ಮತ್ತು ಆತ್ಮ ನಿವೇದನಗಳನ್ನು ತಿಳಿಸುತ್ತಾ ಶರಣಾಗತಿಯು ಹೇಗೆ ಸ್ವತಂತ್ರವಾಗಿಯೂ ಸಹ ಮೋಕ್ಷಕ್ಕೆ ಉಪಾಯವು ಎಂಬುದನ್ನು ಸರಳವಾಗಿ ವಿಶದೀಕರಿಸಿದ್ದಾರೆ ಆರ್ಥ ಪ್ರಪತ್ತಿ, ದೃಪ್ತ ಪ್ರಪತ್ತಿಯ ಲಕ್ಷಣಗಳನ್ನೂ ಸಹ ತಿಳಿಸಿದ್ದಾರೆ ೭ ನೇಯ ಶ್ಲೋಕದಲ್ಲಿ ಕಾಂಚೀಪುರದಲ್ಲಿ ವಿರಾಜಮಾನನಾಗಿರುವ ವರದರಾಜನನ್ನು ಉದ್ದೇಶಿಸಿ, ತಮ್ಮ ಸರ್ವಸ್ವವೂ ಅವನಿಗೆ ಸೇರಿದ್ದು ಎಂದು ಹೇಳಿ ಸಾತ್ವಿಕ ತ್ಯಾಗವನ್ನು ಅನುಸಂದಾನ ಮಾಡಿದ್ದಾರೆ

ಕಡೆಯ ಶ್ಲೋಕದಲ್ಲಿ ಪ್ರಪತ್ತಿಯನ್ನು ಅನುಷ್ಠಿಸಿದ ನಂತರ, ತಾವು ನಿರ್ಭರವಾಗಿ, ನಿರ್ಭಯದಿಂದ ಉಳಿದ ಜೀವಿತ ಕಾಲವನ್ನು ಅವನ ಧ್ಯಾನದಲ್ಲಿ ಕಳೆಯುವುದಾಗಿ ಸಂತೋಷವನ್ನು ವ್ಯಕ್ತಪಡಿಸಿದ್ದಾರೆ

"ಸ್ವಸ್ವತ್ವದ್ ಪಾದ ಪದ್ಮೇ ವರದ ನಿಜ ಭರಂ ನಿರ್ಭರೋ ನಿರ್ಭಯೋಸ್ಮಿ" ಎಂದು ಹೇಳಿ ಗ್ರಂಥ ಸಮಾಪ್ತಿ ಮಾಡಿದ್ದಾರೆ ದಿನವೂ ಅವಶ್ಯವಾಗಿ ಪಠಿಸಲೇಬೇಕಾದ ಸ್ತೋತ್ರ ನ್ಯಾಸದಶಕ

* * *

# ಕಂದ್ಯಾಡೈ ವಂಶದ ಸೇವೆ

- ಕಂದಾಡೈ ಕೇಶವನ್.

ರಾಮಾನುಜರ ಆಪ್ತ ಶಿಷ್ಯರಲ್ಲಿ ಪ್ರಮುಖರಾದವರು ನಾಲ್ಕು ಮಹನೀಯರು ಕೂರೇಶರು, ದಾಶರಧಿ, ವಡುಗನಂಬಿ ಹಾಗೂ ಎಂಬಾರರು, ರಾಮಾನುಜರಿಗೆ ಚೋಳರಾಜನಿಂದ ಆಪತ್ತು ಬಂದಾಗ ದಾಶರಥಿಯ ಮಾತಿನಂತೆ ಕೂರೇಶರು ರಾಮಾನುಜರ ವೇಷವನ್ನು ಧರಿಸಿ ರಾಜ ಭಟರೊಡನೆ ತೆರಳಿದಾಗ, ದಾಶರಥಿಯು ರಾಮಾನುಜರ ಜೊತೆಯಲ್ಲಿ ಕರ್ನಾಟಕಕ್ಕೆ ಬಂದು ಮೇಲುಕೋಟೆ (ತಿರುನಾರಾಯಣಪುರದಲ್ಲಿ) ಸುಮಾರು ಇಪ್ಪತ್ತು ವರ್ಷ ನೆಲೆಸಿ ಶ್ರೀ ವೈಷ್ಣವ ಸಿದ್ಧಾಂತವನ್ನು ಪ್ರಚಾರ ಮಾಡಿದರು ರಾಮಾನುಜರ ಆಪ್ತ ಶಿಷ್ಯರಲ್ಲಿ ಒಬ್ಬರಾದ ದಾಶರಥಿಯೇ ಮೊದಲಿಯಾಂಡಾನ್ ಸ್ವಾಮಿ ಇವರು ರಾಮಾನುಜರ ಸೋದರ ಸಂಬಂಧಿ, ಕಂದಾಡೈ ವಂಶದವರು ವಾದೂಲಸ ಗೋತ್ರದವರು ಶ್ರೀರಂಗದಲ್ಲಿ ಇವರನ್ನು ಆಚಾರ್ಯ ಪುರುಷಾಗ್ರೇಸರೆಂದು ಕರೆಯುತ್ತಿದ್ದರು ರಾಮಾನುಜರು ಯತಿಗಳಾದಮೇಲೆ ದಾಶರಧಿಯವರನ್ನು ತಮ್ಮ ತ್ರಿದಂಡವೆಂದೂ, ಕೂರೇಶರನ್ನು ಪವಿತ್ರವೆಂದೂ ಕರೆಯುತ್ತಿದ್ದರು ದಾಶರಥಿ ರಾಮಾನುಜರ ಜೊತೆಯಲ್ಲಿ ಸದಾ ಇರುತ್ತಿದ್ದರು ಇವರು ಶ್ರೇಷ್ಠ ವಿದ್ವಾಂಸರು ಆಗಮ ಪುರಾಣಗಳನ್ನು ಬಲ್ಲವರಾಗಿದ್ದರು ದೇಲೂರಿನ ಚೆನ್ನಕೇಶವ ದೇವಾಲಯದ ಜೀರ್ಣೋದ್ಧಾರ ಹಾಗೂ ಮೂರ್ತಿಯ ಸ್ಥಾಪನೆಯಲ್ಲಿ ಇವರು ಕಾರಣ ಕರ್ತರು. ದೇಲೂರಿನ ಬಗ್ಗೆ ಬರೆಯುತ್ತಾ ದೇಲುರಿನ ಒಂದು ಶಾಸನದಂತೆ ಮೊದಲಿಯಾಂಡಾನ್ ಅವರು ಕ್ರಿ.ಶ 1117 ರಲ್ಲಿ ದೇಲೂರು ಆಲಯವನ್ನು ಸ್ಥಾಪಿಸಿದರೆಂದು ಹೇಳಲಾಗಿದೆ (ದಿ ಇಂಡಿಯನ್ ಆಂಟಿಕ್ವೆರಿ ಸಂ - 2) ರಾಮಾನುಜರು ಶ್ರೀರಂಗಕ್ಕೆ ಹಿಂತಿರುಗಿದಮೇಲೆ ಚೋಳ ರಾಜನ ಮಗನು ಕುಲೋತ್ತುಂಗನು ಪಾಂಡ್ಯ ಮತ್ತು ಚೇರ ರಾಜರೊಡನೆ ಶ್ರೀರಂಗಕ್ಕೆ ಬಂದು ತಮ್ಮ ತಂದೆ ಮಾಡಿದ ತಪ್ಪುಗಳನ್ನು ಮನ್ನಿಸಿ ಕಾಪಾಡಬೇಕೆಂದು ಕೋರಿದಾಗ ರಾಮಾನುಜರು ಆತನನ್ನು ಅನುಗ್ರಹಿಸಿ ಸಂಸ್ಕಾರ ಪೂರ್ವಕವಾಗಿ ಅವನಿಗೆ ವೈಷ್ಣವ ದೀಕ್ಷೆಯನ್ನು ನೀಡಿ ಮೊದಲಿಯಾಂಡಾನ್‌ರವರ ಶಿಷ್ಯರಾಗಿ ಮಾಡಿದರು ಕುಲೋತ್ತುಂಗನ ಆಸೆಯಂತೆ ಶ್ರೀರಂಗದ ದೇವಾಲಯದ ಎಲ್ಲಾ ಪಾರುಪತ್ಯವನ್ನು ದಾಶರಥಿಗೆ (ಮೊದಲಿಯಾಂಡಾನ್‌ರವರಿಗ) ಒಪ್ಪಿಸಿದರು ಶ್ರೀ ಭಾಷ್ಯ ಕಾಲಕ್ಷೇಪವನ್ನು ಮಾಡಲು ಶ್ರೀ ವೈಷ್ಣವ ಸಿದ್ಧಾಂತವನ್ನು ಪ್ರಚಾರಮಾಡಲು ಯತಿರಾಜರು ದಾಶರಧಿ, ಕೂರೇಶರು, ನಡಾದೂರ್ ಆಳ್ವಾನ್ ಮತ್ತು ಭಟ್ಟರ್‌ರವರನ್ನು ನೇಮಿಸಿದರು ರಾಮಾನುಜರು ತಮ್ಮ ಚರಮ ದೆಶೆಯಲ್ಲಿ ತಿರುಪತಿಗೆ ಪ್ರಯಾಣ ಹೊರಟಾಗ ಕಂದಾಡೈ ದಾಶರಥಿಯವರು ಅವರ ಜೊತೆಯಲ್ಲಿ ಹೊರಟರು ಬೆಟ್ಟದ ಕೆಳಗೆ ಯಾದವರಾಯನು ಮೊದಲಿಯಾಂಡಾನ್‌ರವರ ಆದೇಶದಂತೆ ದೇವಸ್ಥಾನವನ್ನು ನಿರ್ಮಿಸಿದರು ಮೊದಲೇ ದೇಲೂರಿನಲ್ಲಿ ದೇವಸ್ಥಾನವನ್ನು ನಿರ್ಮಿಸಿದ್ದ ಇವರ ಅನುಭವ ಇಲ್ಲಿ ಬಹು ಉಪಕಾರವಾಯಿತು ಅಲ್ಲಿ ಹಿಂದೆ ಚಿತ್ರ ಕೂಟದಲ್ಲಿದ್ದ ಗೋವಿಂದ ರಾಜರ ಮೂಲ ವಿಗ್ರಹವನ್ನು ಮತ್ತು ಉತ್ಸವ ವಿಗ್ರಹವನ್ನು ಕಿತ್ತು ಸಮುದ್ರಕ್ಕೆ ಎಸೆಯಲು ಆಜ್ಞಾಪಿಸಿದ್ದ ಕ್ರಿಮಿಕಂಠ ಚೋಳನ ರಾಜಭಟರಿಂದ ವಿಗ್ರಹಗಳನ್ನು ಉಪಾಯವಾಗಿ ದಾಶರಥಿಯು ರಕ್ಷಿಸಿ ಕಾಪಾಡಿದ್ದರು ಮತ್ತ ಆ ವಿಗ್ರಹಗಳನ್ನು ತಿರುಪತಿಯಲ್ಲಿ ಪ್ರತಿಷ್ಠಿಸಿ ಆ ಮೂರ್ತಿಗೆ ತಿಲ್ಲಾಯ ಗೋವಿಂದ ರಾಜ ಎಂಬ ಹೆಸರನ್ನು ಇಟ್ಟು, ಆ ಸ್ಥಳವನ್ನು ಗೋವಿಂದರಾಜ ಪಟ್ಟಣವೆಂದು ನಾಮಕರಣಮಾಡಿದರು ರಾಮಾನುಜರು ಬೆಟ್ಟವನ್ನು ಮೊಣ ಕಾಲಿನಲ್ಲಿ ಹತ್ತಿ ಹೊರಟಾಗ ದಾಶರಥಿಯು ಅವರ ಜೊತಯಲ್ಲಿ ಶುಶ್ರೂಷೆ ಮಾಡುತ್ತಾ ಹೊರಟರು ಅವರ ದೇಶ ಪರ್ಯಟನ ದಿನಚರಿಯಲ್ಲಿ ವಾಶರಥಿಯು ಶ್ರೀ ಶ್ರೀನಿವಾಸ ವೈಭವಮ್ ಎಂಬುವ ಗ್ರಂಥದಲ್ಲಿ-

"ಕವಿಭಿಃ ವಾದಿಭಿಶ್ಚೈವ  
ಗಾಯಕೈಃ ಪಾರಕ್ಯಸ್ತದಾ  
ನಿತ್ಯಂ ವೇದ್ಯಃ ಸ್ತೂಯಮಾನಃ  
ಶ್ರೀನಿವಾಸಃ ಪರಾತ್ಪರಃ

ಎಂಬುವುದಾಗಿ ಆಗಿನ ಶ್ರೀನಿವಾಸನ ವೈಭವ ಮಹೋತ್ಸವವನ್ನು ಕೊಂಡಾಡಿದ್ದಾರ ರಾಮಾನುಜಾಚಾರ್ಯರ ಮುಖ್ಯ ಶಿಷ್ಯರು ೭೪ ಸಿಂಹಾಸನಾದೀಶರಲ್ಲಿ ಕಂದಾಡ್ಯ ವಂಶದವರಾದ ಮುದಲಿಯಾಂಡಾರ್ ಹಾಗೂ ಕಂದಾಡ್ಯಯಾಂಡಾರ್ ಮುಂದ ಶ್ರೀ ವೈಷ್ಣವ ಸಿದ್ಧಾಂತವನ್ನು ಸರ್ವತೋಮುಖವಾಗಿ ಪ್ರಚಾರ ಮಾಡಿದವರು ಮಣವಾಳ ಮಾಮುನಿಗಳು ಹಾಗೂ ನಿಗಮಾಂತ ವೇದಾಂತದೇಶಿಕರು ಮಣವಾಳರ ಪ್ರಧಾನ ಎಂಟು ಅಷ್ಟದಿಗ್ಗಜರಲ್ಲಿ ಕೋಯಿಲ್ ಕಂದಾಡೈ ಅಣ್ಣ ಹಾಗೂ ಪ್ರತಿವಾದಿ ಭಯಂಕರ ಅಣ್ಣರವರು ಕಂದಾಡೈ ಅಣ್ಣರವರ ಇಚ್ಛೆಯಂತೆ ಪ್ರತಿವಾದಿ ಭಯಂಕರ ಅಣ್ಣರವರು ಶ್ರೀ ವೇಂಕಟೇಶ ಸುಪ್ರಭಾತ ಶ್ರೀ ವೇಂಕಟೇಶ ಸ್ತೋತ್ರಂ ಶ್ರೀ ವೇಂಕಟೇಶ ಪ್ರಪತ್ತಿಃ ಹಾಗೂ ಶ್ರೀ ವೇಂಕಟೇಶ ಮಂಗಳಾ ಶಾಸನವನ್ನು ರಚಿಸಿದರು ಅವುಗಳನ್ನೇ ನಾವು ಪ್ರತಿನಿತ್ಯವೂ ಪಠಿಸುತ್ತಿರುವುದು ಮಣವಾಳರ ನವರತ್ನ ಶಿಷ್ಯರಲ್ಲಿ ಕಂದಾಡೈ ಪೋರೇತ್ತನಾಯನ್ ಕಂದಾಡೈ ಅಣ್ಣಪ್ಪ, ಕಂದಾಡೈ ತೋಳಪ್ಪರಪ್ಪೆ, ಕಂದಾಡೈ ನಾರಣಪ್ಪೈ ಇವರು ತಿರುಮಲೆಯಲ್ಲಿ ಕೆಲವು ಕಾಲ ಶ್ರೀನಿವಾಸನ ಕೈಂಕರ್ಯದಲ್ಲಿ ನಿರತರಾಗಿದ್ದರು. ವೇದಾಂತ ದೇಶಿಕರ ೧೨ ಜನ ಪ್ರಮುಖ ಶಿಷ್ಯರಲ್ಲಿ ಒಬ್ಬರಾದ ಕಂದಾಡೈ ಎಂಬಾರ್‌ರವರು ಶ್ರೀನಿವಾಸನ ನಿತ್ಯ ಕೈಂಕರ್ಯದಲ್ಲಿ ನಿರತರಾಗಿದ್ದವರು ಕೋಯಿಲ್ ಕಂದಾಡೈ ಅಣ್ಣರವರು ರಚಿಸಿದ "ಕಣ್ಣಿನುಣ್ ಶಿರುತ್ತಾಂಬು" ಪ್ರಬಂಧ ಹಾಗೂ ವರವರಮುನಿ ಶತಕದ ವೈಭವಗಳನ್ನು ಯತೀಂದ್ರ ಪ್ರವಣ ಪ್ರಭಾವದ ಗ್ರಂಥದಲ್ಲಿ ನಾವು ಕಾಣಬಹುದು ಈ ಗ್ರಂಥವು ನಿತ್ಯವೂ ಎಲ್ಲಾ ಶ್ರೀ ವೈಷ್ಣವ ಸಮುದಾಯದಲ್ಲಿ ಪಠಿಸುತ್ತಾರೆ ತಿರುಮಂತ್ರಾರ್ಥ, ಶ್ರೀ ವಚನ ಭೂಷಣ, ಶ್ರೀ ಭಾಷ್ಯ ಇತ್ಯಾದಿ ಗ್ರಂಥಗಳನ್ನು ತೆಲುಗಿನಲ್ಲಿ ರಚಿಸಿದ ಗುಂಟೂರಿನ ಕಾವ್ಯ ರತ್ನ, ವೇದಾಂತ ರತ್ನ, ವೇದಾಂತತೀರ್ಥ, ಮತ್ತು ವೇದಾಂತ ವಾಚಸ್ಪತಿ ಮುಂತಾದ ಬಿರುದಾಂಕಿತರಾದ ಕಂದಾಡೈ ಶೇಷಾಚಾರ್ಯರವರು ತಿರುಮಲೆ ಹಾಗೂ ತಿರುಪತಿಯಲ್ಲಿ ತಮ್ಮ ವೈದಿಕ ಭಾಷಣಗಳನ್ನು ನೀಡಿದ್ದಾರೆ ಅವರ ಸಂಪ್ರದಾಯ ಅಕರಾದಿ ಎಂಬುವ ದ್ರಾವಿಡಾಂಧ್ರ ನಿಘಂಟು ಶ್ರೀ ವೈಷ್ಣವ

ಆಚಾರ್ಯ ಪರಂಪರೆಯನ್ನು ತಿಳಿಸುವ ತಮಿಳು ಸಂಪ್ರದಾಯ ಪದಗಳಿಗೆ ತೆಲುಗಿನಲ್ಲಿ ರಚಿಸಿದ ವಿಶಿಷ್ಟವಾದ ಅದ್ಭುತಗ್ರಂಥ ಇದು ೧೯೩೫ ರಲ್ಲಿ ಪ್ರಕಟಣೆಗೊಂಡಿದೆ.

ಕಂದಾಡ್ಯ ತೋಲಪ್ಪರ್ ಮುದಲಿಯಾಂಡಾನ್‌ರವರ ಕುಮಾರರಾದ ಕಂದಾಡೈ ಯಾಂಡಾನ್‌ರವರ ಕುಮಾರರು ಇವರಿಗೆಸ್ವಲ್ಪ ವಿದ್ಯಾ ಹಾಗೂ ಜಾತಿಮದ. ಕೆಲವುಶ್ರೀವೈಷ್ಣವರಿಗೆ ಇವರನ್ನು ಕಂಡರೆ ಹಿಡಿಸುತ್ತಿರಲಿಲ್ಲ ಇವರು ಶ್ರೀರಂಗವನ್ನು ತೊರೆದು ಕೆಲವು ಕಾಲ ತಿರುಮಲೆಯಲ್ಲಿ ಶ್ರೀನಿವಾಸರ ಕೈಂಕರ್ಯದಲ್ಲಿ ನಿರತರಾಗಿದ್ದರು ಶ್ರೀಕೃಷ್ಣ ಜಯಂತಿ ಆಚರಿಸುವಾಗ ತೆಂಗಲೆಯವರು ತೋಲಪ್ಪರ್ ಸಂಪ್ರದಾಯವನ್ನು ಆಚರಿಸುತ್ತಾರೆ ಭಗವದ್ ರಾಮಾನುಜರು ತಿರುಮಲೆಯಲ್ಲಿ ಶ್ರೀನಿವಾಸನ ಆರಾಧನೆ ಕ್ರಮವನ್ನು ಪ್ರಚಾರಮಾಡಿದಾಗ ಕೂರೇಶರು, ಕಂದಾಡೈ ದಾಶರಥಿ, ಹನುಮತ್ ದಾಸರು, ಕಂದಾಡೈ ತೋಲಪ್ಪರ್, ವಾಂಗಿ ಪುರತ್ ನಂಬಿ ಇವರಿಗೆ ತಿರುಮಲೆಯಲ್ಲಿ ನಿತ್ಯಕ್ರಮವನ್ನು ಉಪದೇಶಮಾಡಿದರು ಕಂದಾಡೈ ವಂಶಸ್ಥರಾದ ಮಣವಾಳ ಮಹಾಮುನಿಗಳು ತಿರುಮಲೆಯಲ್ಲಿ ತೊಂಡರಡಿಪ್ಪೊಡಿ ಆಳ್ವಾರ್ ರಚಿಸಿದ "ತಿರುಪ್ಪಳ್ಳಿ ಎಳುಚ್ಚಿ ಪಾಶುರಗಳನ್ನು ಧನುರ್ಮಾಸ ಕಾಲದಲ್ಲಿ ಮಾತ್ರ ಪ್ರಾತಃಕಾಲದಲ್ಲಿ ಸುಪ್ರಭಾತವಾಗಿ ಹಾಡಬೇಕು ಮಿಕ್ಕ ತಿಂಗಳುಗಳಲ್ಲಿ ಪ್ರತಿವಾದಿ ಭಯಂಕರ ಅಣ್ಣರವರು ರಚಿಸಿದ ಶ್ರೀನಿವಾಸನ ಸುಪ್ರಭಾತ ಇತ್ಯಾದಿಗಳನ್ನು ಹಾಡಬೇಕೆಂದು ಕಟ್ಟಲೆ ಮಾಡಿದರು ತಿರುಮಲೆಯಲ್ಲಿ ತೀರ್ಥ ಪ್ರಸಾದ, ವಿಶೇಷ ಗೌರವಗಳನ್ನು ಇಂದಿಗೂ ನೀಡುವಾಗ ರೂಢಿಯಲ್ಲಿರುವುದು ಕ್ರಮವಾಗಿ ದೊಡ್ಡ ಜೀಯರ್, ಚಿಕ್ಕ ಜೀಯರ್, ತೋಳಪ್ಪಾಚಾರ್ಯ, ಅನಂತನ್ ಪಿಳ್ಳೈ, ಕಂದಾಡೈ ಪ್ರತಿವಾದಿಭಯಂಕರನ್, ವೀರವಲ್ಲಿಯಾರ್, ಧರ್ಮಪುರಿಯಾರ್, ಪರವಸ್ತು ಪಟ್ಟರ್ ಪಿರಾನ್ ಜೀಯರ್ ಶಿಷ್ಯರು ಈ ಕ್ರಮವಾಗಿ ತಿರುಮಲ - ತಿರುಪತಿ ಮತ್ತು ತಿರುಚಾನೂರ್‌ನಲ್ಲಿ ಅಂದಿನಿಂದ ಇಂದಿನವರೆಗೂ ನಡೆದು ಬಂದ ಸಂಪ್ರದಾಯ ಮುಂದುವರಿಯುತ್ತಿದೆ. ತಿರುಪತಿಯಲ್ಲಿ ಅಧ್ಯಯನ ಉತ್ಸವ ಕಾಲದಲ್ಲಿ ಹತ್ತು ದಿನ ಎಲ್ಲಾ ಆಳ್ವಾರುಗಳಿಗೆ ಸಾತ್ತು ಮುರೈ ನಡೆದರೂ, ಮಾಸ ತಿರುನಕ್ಷತ್ರದ ಹಾಗೆ ದಾಶರಥಿಗೆ (ಮೊದಲಿಯಾಂಡಾನ್ ರವರಿಗೆ) ಒಂದು ದಿನ ಮಾತ್ರ ಸಾತ್ತುಮುರೈ ನಡೆಯುತ್ತೆ ಕಂದಾಡೈ ವಂಶಸ್ಥರಲ್ಲಿ ಶ್ರೀ ಮೊದಲಿಯಾಂಡಾನ್ ತಿರುಮಾಳಿಗೆ ಪರಂಪರೆ "ಶ್ರೀ ವೇಂಕಟಗುರು" ಎಂಬ ಆಚಾರ್ಯರು ಶಾಖಾಪ್ರವರ್ತಕರು. ಇವರಿಗೆ ಅಣ್ಣಾವಿಲಪ್ಪನ್ ಎಂಬುವ ಹೆಸರು ಇವರ ಸಹೋದರರಾದ "ಅಳಗಿಯ ಮಣವಾಳಗುರು" ಎಂಬುವರು ತಿರುನಾರಾಯಣ ಪುರಂ ದೊಡ್ಡಯಾಚಾರ್ಯರ ತಿರುಮಾಳಿಗೆ ಶಾಖಾಪ್ರವರ್ತಕರು. ಇವರ ಶಿಷ್ಯರೆಲ್ಲರೂ ತಿರುಮಲೆಯ ಶ್ರೀನಿವಾಸನ ಅನನ್ಯಭಕ್ತರು ಈ ಲೇಖನದ ದಾಸನು ೧೯೬೦ ರಿಂದಲೂ ಸಪ್ತಗಿರಿ ಕನ್ನಡ ಇಂಗ್ಲೀಷು ಭಾಷೆಗಳಲ್ಲಿ ಹಲವಾರು ಲೇಖನಗಳನ್ನು ಆಳ್ವಾರ್ ಆಚಾರ್ಯರ, ಬಗ್ಗೆ ಮಹರ್ಷಿಗಳ ಬಗ್ಗೆ, ಪ್ರಸ್ಥಾನ ಕ್ರಮಗಳ ಬಗ್ಗೆ ಇತಿಹಾಸ ಪುರಾಣ. ವೇದ ಉಪನಿಷತ್ತುಗಳ ಬಗ್ಗೆ ಬರೆದು ಯಕ್ಕಿಂಚಿತ್ ಶ್ರೀನಿವಾಸನ ಅಡಿದಾವರೆಗಳಲ್ಲಿ ಸಮರ್ಪಿಸಿದ್ದಾನೆ. ಅದು ಅವನ ಕೃಪೆ

ಕಲ್ಯಾಣಾದ್ಭುತಗಾತ್ರಾಯ
ಕಾಮಿತಾರ್ಥ ಪ್ರದಾಯಿನೇ
ಶ್ರೀಮದ್ವೇಂಕಟನಾಥಾಯ
ಶ್ರೀನಿವಾಸಾಯ ತೇ ನಮಃ

ವೇಂಕಟಾದ್ರಿ ಸಮಂ ಸ್ಥಾನಂ
ಬ್ರಹ್ಮಾಂಡೇ ನಾಸ್ತಿ ಕಿಂಚನ
ವೆಂಕಟೇಶ ಸಮೋ ದೇವೋ
ನ ಭೂತೋ ನ ಭವಿಷ್ಯತಿ



# ಈಶಾವಾಸ್ಯ ಉಪನಿಷತ್

ವ್ಯಾಖ್ಯಾನ - ಎಂ. ಸಿ. ರಾಮಾರಾವ್.

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ
ವ್ಯಶೇಮ ದೇವಹಿತಂ ಯದಾಯುಃ
ಓಂ ಶಾಂತಿಃ ಶಾಂತಿಃ ಶಾಂತಿಃ

## ಈಶಾವಾಸ್ಯೋಪನಿಷತ್

ಈಶಾವಾಸ್ಯ ಮಿದಂ ಸರ್ವಂ
ಯತ್ಕಿಂಚಜಗತ್ಯಾಂಜಗತ್ |
ತೇನ ತ್ಯಕ್ತೇನ ಭುಂಜೀಥಾ
ಮಾಗೃಧಃ ಕಸ್ಯಸ್ವಿದ್ಧನಂ || ೧

ಈ ಕ್ಷಣಿಕವಾದ ಜಗತ್ತಿನಲ್ಲಿ ಬದಲಾವಣೆ ಹೊಂದುವಂತಹುದು ಏನಿದೆಯೋ ಅದೆಲ್ಲವೂ ಭಗವಂತನಿಂದ ಆವರಿಸಬೇಕು. ಈ ತ್ಯಾಗದಿಂದಲೇ ನೀನು ಅವಲಂಬನವಡೆ, ಬೇರೊಬ್ಬರ ಐಶ್ವರ್ಯಕ್ಕಾಗಿ ಆಸೆಪಡಬೇಡ

ಕುರ್ವನ್ನೇವೇಹ ಕರ್ಮಾಣಿ
ಜಿಜೀವಿಷೇಚ್ಛತಂಸಮಾಃ|
ಏವಂ ತ್ವಯಿ ನಾನ್ಯಥೇತೋಽಸ್ತಿ
ನ ಕರ್ಮ ಲಿಪ್ಯತೇ ನರೇ || ೨

ಈ ಜಗತ್ತಿನಲ್ಲಿ ಕರ್ಮಮಾಡುತ್ತಲೇ ನೂರು ವರ್ಷಗಳಕಾಲ ಬದುಕುವ ಅಪೇಕ್ಷೆಯನ್ನು ತಾಳಬೇಕು, ಕರ್ಮದ ದೋಷದಿಂದ ಮುಕ್ತನಾಗಲು ಮಾನವನಿಗಿರುವುದು ಇದೊಂದೇ ದಾರಿ. ಬೇರೆ ಯಾವುದೂ ಇಲ್ಲ.

ಅಸುರ್ಯಾನಾಮ ತೇ ಲೋಕಾ
ಅಂಧೇನ ತಮಸಾವೃತಾಃ |
ತಾಂ ಸ್ತೇ ಪ್ರೇತ್ಯಾಭಿಗಚ್ಛನ್ತಿ
ಯೇ ಕೇ ಚಾತ್ಮಹನೋ ಜನಾಃ ||

ಆತ್ಮಹಾನಿಯನ್ನುಂಟುಮಾಡುವವರು ಮರಣಾನಂತರ ಕತ್ತಲಿನಿಂದ ಆವೃತವಾದ ಅಸುರರ ಜಗತ್ತಿಗೆ ಬಂದು ಬೀಳುವುದು ಖಂಡಿತ.

ಅನೇಜದೇಕಂ ಮನಸೋ ಜವೀಯೋ
ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್ |
ತದ್ಧಾವತೋಽನ್ಯಾನತ್ಯೇತಿ ತಿಷ್ಠತ್
ತಸ್ಮಿನ್ ಅಪೋಮಾತರಿಶ್ವಾದಧಾತಿ || ೪

ಆತ್ಮವು ಒಂದು, ಅದು ಚಲಿಸುವುದಿಲ್ಲ ಆದರೂ ಅದು ಮನಸ್ಸಿಗಿಂತ ವೇಗವಾದದ್ದು ಹೀಗೆ ವೇಗವಾಗಿ ಚಲಿಸುತ್ತ ಅದು ಇಂದ್ರಿಯಗಳ ಗ್ರಹಣವನ್ನು ಮೀರಿದೆ. ತಾನು ಸ್ಥಿರವಾಗಿದ್ದು ಓಡುವ ಇತರ ಎಲ್ಲವನ್ನೂ ಮೀರುತ್ತದೆ. ಸುಮ್ಮನೆ ಇದ್ದೇ ವಿಶ್ವಶಕ್ತಿಯಿಂದ ಅದು ಎಲ್ಲ ಜೀವಿಗಳ ಚಟುವಟಿಕೆಗಳಿಗೂ ಶಕ್ತಿಯನ್ನು ನೀಡುತ್ತದೆ.

ತದೇಜತಿ ತನ್ನೈಜತಿ
ತದ್ದೂರೇ ತದ್ವಂತಿಕೇ |
ತದಂತರಸ್ಯ ಸರ್ವಸ್ಯ
ತದು ಸರ್ವಸ್ಯಾಸ್ಯಬಾಹ್ಯತಃ || ೫

ಅದು ಚಲಿಸುತ್ತದೆ. ಅದು ಅಚಲವಾಗಿಯೂ ಇರುತ್ತದೆ. ಅದು ಹತ್ತಿರದಲ್ಲೂ ಇದೆ, ದೂರದಲ್ಲೂ ಇದೆ; ಆದರೂ ವಾಸ್ತವವಾಗಿ ಅದು ಎಲ್ಲದರ ಒಳಗೂ ಹೊರಗೂ ಇದೆ.

ಯಸ್ತುಸರ್ವಾಣಿಭೂತಾನಿ
ಆತ್ಮನ್ಯೇವಾನುಪಶ್ಯತಿ |
ಸರ್ವಭೂತೇಷುಚಾತ್ಮಾನಂ
ತತೋನವಿಜುಗುಪ್ಸತೇ ||

ಈ ಎಲ್ಲ ಜೀವಿಗಳೂ ತನ್ನ ಆತ್ಮನಿಂದ ಬೇರೆಯಲ್ಲ. ತನ್ನ ಆತ್ಮವೂ ಇತರ ಜೀವಿಗಳಿಗಿಂತ ಬೇರೆಯಲ್ಲ - ಎಂದು ಅರಿತ ಜ್ಞಾನಿಯು, ಆ ಜ್ಞಾನದ ಬಲದಿಂದಾಗಿ ಯಾರನ್ನೂ ದ್ವೇಷಿಸದ ಸ್ಥಿತಿಯನ್ನು ಮುಟ್ಟುತ್ತಾನೆ.

ಯಸ್ಮಿನ್ ಸರ್ವಾಣಿಭೂತಾನಿ
ಆತ್ಮೈವಾಭೂದ್ವಿಜಾನತಃ |

* * * * * * * * * *

ಕನ್ನಡದಲ್ಲಿ ನಾರಾಯಣೀಯವನ್ನು ಸರಳ ಸುಲಭವಾಗಿ ಅನುವಾದಿಸಿ ನೀಡಿರುವ ಶ್ರೀಯುತ ಎಂ. ಸಿ. ರಾಮರಾಯರು ಕನ್ನಡದ ಜನತೆಗೆ ತಮ್ಮ ಉಪನಿಷತ್ ವಿವರಣೆಗಳಿಂದ ಹೆಚ್ಚು ಪರಿಚಿತರು

ಶ್ರೀಯುತರು 1977 - 78 ರಲ್ಲಿ ಬರೆದ ಅಷ್ಟೋಪನಿಷತ್ ವಿವರಣೆ ಜನಪ್ರಿಯವಾಗಿ ಎರಡು ಮುದ್ರಣಗಳನ್ನು ಕಂಡಿದೆ. ಶೃಂಗೇರಿಯ ಶ್ರೀ ಶ್ರೀ ಅಭಿನವ ವಿದ್ಯಾತೀರ್ಥ ಶ್ರೀಪಾದರೂ, ಪೇಜಾವರದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರೂ ಈ ಕೃತಿಯನ್ನು ಮೆಚ್ಚಿ ಅನುಗ್ರಹಿಸಿದ್ದಾರೆ. ಈಶ, ಕೇನ, ಕಠ, ಮುಂಡಕ, ಮಾಂಡೂಕ್ಯ ಪ್ರಶ್ನ ಐತರೇಯ, ತೈತ್ತರೀಯ ಉಪನಿಷತ್ತುಗಳ ಈ ವಿವರಣೆಯನ್ನು ಇಲ್ಲಿ ಧಾರಾವಾಹಿಯಾಗಿಸಲಾಗಿದೆ ಮೊದಲನೆಯದಾಗಿ ಈಶಾವಾಸ್ಯವನ್ನು ವಿವರಿಸಲಾಗಿದೆ.

* * * * * * * * * *

ತತ್ರ ಕೋ ಮೋಹಃ ಕಶ್ಶೋಕ
ಏಕತ್ವಮನುಪಶ್ಯತಃ || ೭

ಎಲ್ಲ ಜೀವಿಗಳೂ ತನ್ನ ಆತ್ಮವೇ ಎಂಬುದನ್ನು ತಿಳಿ ಸಕಲ ಸೃಷ್ಟಿಯ ಏಕತೆಯನ್ನು ಕಂಡ ಜ್ಞಾನಿಗೆ ಯಾವ ಮೋಹ ಮತ್ತು ಶೋಕ ತಾನೇ ಇರಲು ಸಾಧ್ಯ!

ಸಪರ್ಯಗಾಚ್ಛು ಕ್ರಮಕಾಯಮವ್ರಣ ಮಸ್ನಾ
ವಿರಂ ಶುದ್ಧಮಪಾಪವಿದ್ಧಂ |
ಕವಿರ್ಮನೀಷೀ ಪರಿಭೂಃ ಸ್ವಯಂಭೂಃ
ಯಥಾತಥ್ಯತೋರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ
ಸಮಾಭ್ಯಃ || ೮

ಅವನು ಸರ್ವವ್ಯಾಪಿ, ಜ್ಯೋತಿರ್ಮಯನು, ಶರೀರವಿಲ್ಲದವನು, ವ್ರಣವಿಲ್ಲದವನು, ನರಗಳಿಲ್ಲದವನು, ಶುದ್ಧನು, ಪಾಪದ ಹೊಡೆತವಿಲ್ಲದವನು, ಕವಿಯು, ಸರ್ವಜ್ಞನು, ಸರ್ವೋತ್ತಮನು, ಸ್ವಯಂಭು, ಅವನು ಶಾಶ್ವತರಾದ ಪ್ರಜಾಪತಿಗಳಿಗೆ ಅವರವರ ಕರ್ತವ್ಯವನ್ನು ಯಥಾರೂಪವಾಗಿ ಹಂಚಿಕೊಟ್ಟಿರುತ್ತಾನೆ

ಅನ್ಧಂತಮಃಪ್ರವಿಶನ್ತಿ
ಯೇಽವಿದ್ಯಾಮುಪಾಸತೇ |
ತತೋಭೂಯ ಇವತೇ ತಮೋ
ಯ ಉ ವಿದ್ಯಾಯಾಂ ರತಾಃ || ೯

ಅವಿದ್ಯೆಯನ್ನು ಉಪಾಸಿಸುವವರು ಕುರುಡುಗೊಳಿಸುವ ಕತ್ತಲೆಯನ್ನು ಪ್ರವೇಶಿಸುತ್ತಾರೆ, ವಿದ್ಯೆಯಲ್ಲಿ ಆನಂದವನ್ನು ಪಡೆಯುವವರು ಅದಕ್ಕಿಂತಲೂ ಹೆಚ್ಚಿನ ಕತ್ತಲನ್ನು ಪ್ರವೇಶಿಸುತ್ತಾರೆ

ಅನ್ಯದೇವಾಹುರ್ವಿದ್ಯಯಾ
ಅನ್ಯದಾ ಹುರವಿದ್ಯಯಾ |
ಇತಿ ಶುಶ್ರುಮ ಧೀರಾಣಾಂ
ಯೇ ನಸ್ತದ್ವಿಚಚಕ್ಷಿರೇ || ೧೦

ವಿದ್ಯೆಯಿಂದ ಒಂದು ಫಲ ದೊರಕುತ್ತದೆ ಎನ್ನುತ್ತಾರೆ, ಅವಿದ್ಯೆಯಿಂದ ಮತ್ತೊಂದು ಫಲ ದೊರಕುತ್ತದೆನ್ನುತ್ತಾರೆ ನಮಗೆ ಇದನ್ನು ವಿವರಿಸಿದ ಪ್ರಾಜ್ಞರಿಂದ ಹೀಗೆ ನಾವು ಕೇಳಿರುತ್ತೇವೆ

ವಿದ್ಯಾಂ ಚಾಽವಿದ್ಯಾಂ ಚ
ಯಸ್ತದ್ವೇದೋಭಯಂ ಸಹ |
ಅವಿದ್ಯಯಾ ಮೃತ್ಯುಂ ತೀರ್ತ್ವಾ
ವಿದ್ಯಯಾಮೃತಮಶ್ನುತೇ || ೧೧

ವಿದ್ಯೆ ಮತ್ತು ಅವಿದ್ಯೆ ಇವೆರಡನ್ನೂ ಬಲ್ಲವನು ಅವಿದ್ಯೆಯಿಂದ ಮೃತ್ಯುವನ್ನು ದಾಟಿ ವಿದ್ಯೆಯಿಂದ ಅಮೃತತ್ವದ ಅನುಭವವನ್ನು ಪಡೆಯುತ್ತಾನೆ

ಅನ್ಧಂತಮಃ ಪ್ರವಿಶನ್ತಿಯೇ
ಅಸಂಭೂತಿಮುಪಾಸತೇ |
ತತೋ ಭೂಯ ಇವ ತೇ ತಮೋ ಯ
ಉ ಸಂಭೂತ್ಯಾಂ ರತಾಃ ||

ಅವಿದ್ಯೆಯನ್ನು ಉಪಾಸಿಸುವವರು ಕುರುಡುಗೊಳಿಸುವ ಕತ್ತಲನ್ನು ಪ್ರವೇಶಿಸುತ್ತಾರೆ ವಿದ್ಯೆಯಲ್ಲಿ ರಮಿಸುವವರು ಇನ್ನೂ ಹೆಚ್ಚಿನ ಕತ್ತಲನ್ನು ಪ್ರವೇಶಿಸುತ್ತಾರೆ ಎನ್ನುವಂತಿದೆ.

ಅನ್ಯದೇವಾಹುಸ್ಸಂಭವಾತ್
ಅನ್ಯದಾಹುರಸಂಭವಾತ್ |
ಇತಿಶುಶ್ರುಮ ಧೀರಾಣಾಂ
ಯೇನಸ್ತದ್ವಾ ಚ ಚಕ್ಷಿರೇ || ೧೩

ಶುದ್ಧ ಇರವು ಒಂದು ಫಲವನ್ನು ನೀಡುತ್ತದೆ ಅಗಲುವಿಕೆಯು ಬೇರೊಂದು ಫಲವನ್ನು ನೀಡುತ್ತದೆ ನಮಗೆ ಅದನ್ನು ಬೋಧಿಸಿದ ಜ್ಞಾನಿಗಳಿಂದ ನಾವು ಹಾಗೆ ಕೇಳಿರುತ್ತೇವೆ

ಸಂಭೂತಿಂ ಚ ವಿನಾಶಂ ಚ
ಯಸ್ತದ್ವೇದೋಭಯಂ ಸಹ |
ವಿನಾಶೇನ ಮೃತ್ಯುಂತೀರ್ತ್ವಾ
ಸಂಭೂತ್ಯಾಮೃತಮಶ್ನುತೇ || ೧೪

ಬ್ರಹ್ಮವನ್ನು ಬಲ್ಲವನೂ ಮತ್ತು ವಿನಾಶವನ್ನು ಬಲ್ಲವನೂ ಇಬ್ಬರೂ ಒಟ್ಟಿಗೆ ವಿನಾಶದ ಮೂಲಕ ಮೃತ್ಯುವನ್ನು ದಾಟಿ ಸಂಭೂತಿಯ ಮೂಲಕ ಅಮೃತತ್ವವನ್ನು ಸಾಧಿಸುತ್ತಾರೆ

ಹಿರಣ್ಮಯೇನ ಪಾತ್ರೇಣ
ಸತ್ಯಸ್ಯಾಪಿಹಿತಂ ಮುಖಂ |
ತತ್ತ್ವಂ ಪೂಷನ್ನಪಾವೃಣು
ಸತ್ಯಧರ್ಮಾಯದೃಷ್ಟಯೇ || ೧೫

ಸತ್ಯದ ಮುಖವು ಹೊಳೆಯುತ್ತಿರುವ ಬಂಗಾರದ ಮುಚ್ಚಳದಿಂದ ಮುಚ್ಚಲ್ಪಟ್ಟಿವೆ ಓ ಸತ್ಯಪುರುಷನೇ! ಆ ಮುಚ್ಚಳವನ್ನು ನೀನೇ ತೆಗೆದು ಸತ್ಯ ಮತ್ತು ಧರ್ಮದ ಜ್ಯೋತಿಯನ್ನು ನಮಗೆ ತೋರಿಸು

ಪೂಷನ್ನೇಕರ್ಷೇ ಯಮಸೂರ್ಯ
ಪ್ರಾಜಾಪತ್ಯವ್ಯೂಹರಶ್ಮೀನ್
ಸಮೂಹ ತೇಜೋ |
ಯತ್ತೇರೂಪಂ ಕಲ್ಯಾಣತಮಂ
ತತ್ತೇಪಶ್ಯಾಮಿಯೋಽಸಾವಸೌ
ಪುರುಷಸ್ಸೋಽಹಮಸ್ಮಿ|| ೧೬

ಆಕಾಶದಲ್ಲಿ ಏಕಾಂಗಿಯಾಗಿ ಸಂಚರಿಸುವ ಸೂರ್ಯನೇ, ಎಲ್ಲವನ್ನೂ ನಿಯಂತ್ರಣಗೊಳಿಸುವ ಯಮನೇ, ಸೌರವ್ಯೂಹದ ಅತ್ಯಂತ ಸೂಕ್ಷ್ಮವೂ ಆದ ನಿನ್ನ ಕಿರಣಗಳನ್ನು ಸರಿಸು ನಿನ್ನ ಪ್ರಭೆಯನ್ನು ಒಂದುಗೂಡಿಸಿಕೋ ನಿನ್ನ ನಿಜವಾದ ಅತ್ಯಂತ ಮಂಗಳಕರವಾದ ತೇಜಸ್ಸನ್ನು ನಾನು ನೋಡಬಯಸುತ್ತೇನೆ

ವಾಯುರನಿಲಮಮೃತ
ಮಥೇದಂ ಭಸ್ಮಾಂತಂ ಶರೀರಂ
ಓಂ ಕ್ರತೋಸ್ಮರಕೃತಂಸ್ಮರ
ಕ್ರತೋಸ್ಮರಕೃತಂಸ್ಮರ || ೧೭

ನನ್ನಲ್ಲಿರುವ ಮುಖ್ಯ ಶಕ್ತಿಗಳು ಅಮೃತವಾದ ಪ್ರಾಣದಲ್ಲಿ ಮತ್ತು ವಿಶ್ವಶಕ್ತಿಯಲ್ಲಿ ಇನ್ನೇನು ಲೀನವಾಗಲಿದೆ ಆಗ ಈ ಮರ್ತ್ಯದೇಹವು ಬೂದಿಯಾಗುತ್ತದೆ ಓ ಮನಸೇ ನೆನಪಿರಲಿ, ನಿನ್ನ ಒಳ್ಳೆಯ ಕರ್ಮಗಳು ನೆನಪಿನಲ್ಲಿರಲಿ, ನಿನ್ನ ಒಳ್ಳೆಯ ಕರ್ಮಗಳು ನೆನಪಿನಲ್ಲಿರಲಿ

ಅಗ್ನೇನಯಸುಪಥಾರಾಯೇ
ಅಸ್ಮಾನ್ ವಿಶ್ವಾನಿದೇವ
ವಯುನಾನಿ ವಿದ್ವಾನ್ |
ಯುಯೋಽದ್ಯಸ್ಮಜ್ಜುಹುರಾಣ
ಮೇನೋ ಭೂಯಿಷ್ಠಾಂ ತೇ ನಮ
ಉಕ್ತಿಂ ವಿಧೇಮ || ೧೮

ಓ ಅಗ್ನಿಯೇ ನಮ್ಮ ಸತ್ಕರ್ಮಫಲಗಳಾದ ಐಶ್ವರ್ಯವನ್ನು ಅನುಭವಿಸಲು ನಮ್ಮನ್ನು ಒಳ್ಳೆಯ ದಾರಿಯಲ್ಲಿ ನಡೆಸು ನಮ್ಮ ಎಲ್ಲ ಕರ್ಮಗಳನ್ನೂ ನೀನು ಬಲ್ಲೆ ಮೋಸದಿಂದ ಕೂಡಿದ ಪಾಪವನ್ನು ನಾಶಮಾಡು ಮಾತುಗಳಿಂದ ನಾವು ಮತ್ತೆ ಮತ್ತೆ ನಿನ್ನನ್ನು ನಮಸ್ಕರಿಸುತ್ತೇವೆ

ಈಶಾವಾಸ್ಯೋಪನಿಷತ್ ಸಮಾಪ್ತಂ

(ಮುಂದಿನ ಸಂಚಿಕೆಯಲ್ಲಿ
- ಕೇನೋಪನಿಷತ್)

# ನವ - ನವಕ

- ರಘುಸುತ.

ಮನುಸ್ಮೃತಿಯಲ್ಲಿ ಒಂದು ಕಡೆ 'ನವ - ನವಕ' ಎಂಬ ಒಂದು ವಿಭಾಗವಿದೆ ಇದು ಆ ಸ್ಮೃತಿಯ ೩ ನೆಯ ಅಧ್ಯಾಯದಲ್ಲಿದೆ ಈ ಸ್ಮೃತಿಯಲ್ಲಿ ಗೃಹಸ್ಥ ಧರ್ಮದ ಬಗ್ಗೆ ಅನೇಕ ವಿವರಗಳಿವೆ. ಮುಖ್ಯವಾಗಿ ಗೃಹಸ್ಥಧರ್ಮದ ಪ್ರಾಮುಖ್ಯತೆ, ಆ ಆಶ್ರಮದ ಮಹಿಮೆ, ನಿಜ ಅರ್ಥದ ಗೃಹಸ್ಥನು ಯಾರು?, ಸಂಧ್ಯಾವಂದನೆಯ ಅಗತ್ಯವೇನು ?, ಗೃಹಸ್ಥನು ತನ್ನ ಪೋಷಕವರ್ಗವನ್ನು ಹೇಗೆ ನೋಡಿಕೊಳ್ಳಬೇಕು?, ತನ್ನ ಧನದ ಸದುಪಯೋಗವನ್ನು ಹೇಗೆ ಮಾಡಬೇಕು?, ಧರ್ಮಾಚರಣೆಯಿಂದ ತಾತ್ವಿಕಲಾಭವೇನು? - ಇತ್ಯಾದಿಗಳನ್ನು ವಿವರಿಸಿದ ನಂತರ 'ನವ - ನವಕ'ದ ವಿವರಗಳಿವೆ ಇದು ಸೂತ್ರ ರೂಪದಲ್ಲಿದೆ ಈ ಸೂತ್ರಗಳನ್ನು ತಪ್ಪದೆ ಅನುಸರಿಸಬೇಕೆಂದು ದಕ್ಷನು ತಿಳಿಸುತ್ತಾನೆ.

ಈ 'ನವ - ನವಕ' ಎನ್ನುವ ಪ್ರಯೋಗ ಸ್ಕಂಧ ಪುರಾಣದ ಕಾಶೀಖಂಡದ ಪೂರ್ವಾರ್ಧದ ೪೦ ನೇ ಅಧ್ಯಾಯದಲ್ಲಿ ಇದೇ ಅರ್ಥದಲ್ಲಿ ನೀಡಲಾಗಿದೆ.

'ನವ - ನವಕ' ಎನ್ನುವುದು ೯ ಅಂಶಗಳು, ಪ್ರತಿಯೊಂದು ಅಂಶದಲ್ಲೂ ಮತ್ತೆ ೯ ಸೂಚನೆಗಳು ಇವೆ ಒಟ್ಟು ೯ X ೯ = ೮೧ ಸೂಚನೆಗಳು ಇದರಲ್ಲಿವೆ ಈ ಸೂಚನೆಗಳನ್ನು ತಪ್ಪದೆ ಅನುಸರಿಸಬೇಕೆಂದು ಸ್ಮೃತಿಕಾರನು ತಿಳಿಸುತ್ತಾನೆ ಇವು ವ್ಯಕ್ತಿಯ ಸದಾಚಾರ ಹಾಗೂ ವ್ಯವಹಾರಜ್ಞಾನಕ್ಕೆ ಸಂಬಂಧಪಟ್ಟದ್ದಾಗಿದ್ದು, ಅನುಕರಣೀಯವಾಗಿವೆ

## ೧. ಒಂಭತ್ತು ಅನುಕರಣೀಯ ಮಂಗಳಕಾರಕ ಮಾತುಗಳು :

ಅತಿಥಿ ಸೇವೆಯು ಮಾನವನ ಮುಖ್ಯ ಕರ್ತವ್ಯ ಅತಿಥಿಯು ಮನೆಗೆ ಬಂದ ಮೇಲೆ ಗೃಹಸ್ಥನು ಏನು ಮಾಡಬೇಕು, ಯಾವ ರೀತಿ ವರ್ತಿಸಬೇಕು - ಎಂಬುದರ ಬಗ್ಗೆ ದಕ್ಷನು ಒಂಭತ್ತು ವಿಷಯಗಳನ್ನು ತಿಳಿಸುತ್ತಾನೆ

೧) ಸೌಮ್ಯ ಮನಸ್ಸನ್ನು ಹೊಂದಿರಬೇಕು ೨) ಅತಿಥಿಯನ್ನು ಸೌಮ್ಯ ದೃಷ್ಟಿಯಿಂದ ಕಾಣಬೇಕು ೩) ಸೌಮ್ಯಮುಖ ಭಾವವನ್ನು ಹೊಂದಿರಬೇಕು

೪) ಗೃಹಸ್ಥನು ಎದ್ದು ನಿಂತು ಅತಿಥಿಯನ್ನು 'ಬನ್ನಿ-ಕುಳಿತುಕೊಳ್ಳಿ' ಎಂದು ಸ್ವಾಗತಿಸಬೇಕು ೫) ಅವರ ಕುಶಲವನ್ನು ಕೇಳಬೇಕು ೬) ಅತಿಥಿಗಳೊಂದಿಗೆ ಸ್ನೇಹಪೂರ್ವಕವಾಗಿ ಮಾತುಕತೆಯಾಡಬೇಕು ೭) ಬಂದಿರುವ ಅತಿಥಿಯ ಸಮೀಪದಲ್ಲಿ ಕುಳಿತುಕೊಂಡು, ಆತನ ಸೇವೆ ಮಾಡಬೇಕು- ೯) ಅತಿಥಿಯು ಮನೆ ಬಿಟ್ಟು ಹೋಗುವಾಗ ಆತನೊಂದಿಗೆ ಸ್ವಲ್ಪದೂರ ಹೋಗಿ, ಬಿಟ್ಟು ಬರಬೇಕು

ಮನಶ್ಚಕ್ಷುರ್ಮುಖಂ ವಾಚಂ
ಸೌಮ್ಯಂ ದದ್ಯಾಚತುಷ್ಟಯಮ್
ಅಭ್ಯುತ್ಥಾನ ಮಿಹಾಗಚ್ಛ
ಪೃಚ್ಛಾಲಾಪ ಪ್ರಿಯಾನ್ವಿತಃ
ಉಪಾಸನಮನು ವ್ರಜ್ಯಾ
ಕಾರ್ಯಾಣ್ಯೇತಾನಿ ಯತ್ನತಃ

(೩/ ೪-೫)

ಈ ಒಂಭತ್ತು ಮಾತುಗಳು ಅಮೃತ ಸಮಾನವಾಗಿದ್ದು ಮಂಗಳಕಾರಕವಾಗಿವೆ ಇವು ಗೃಹಸ್ಥನ ಔನ್ನತ್ಯಕ್ಕೆ ಸಾಧನವಾಗಿವೆ ಆದುದರಿಂದ ಪ್ರಯತ್ನಪಟ್ಟು ಈ ವಿಷಯಗಳನ್ನು ಅನುಸರಿಸಲೇಬೇಕು

ಈ ವಿಷಯ ಆಧುನಿಕ ಯುಗಕ್ಕೆ ಹೊಂದುವುದು ಕಷ್ಟಕರವಾದರೂ ಬೀದಿಯಲ್ಲಿ ಹೋಗುವವರೆಲ್ಲ ಬಂದು ಕೇಳಿದಾಗ ಸಹಾಯ ಮಾಡಬಾರದು ಗುರುತು ಪರಿಚಯದವರು ಬಂದಾಗ ತಪ್ಪದೆ ಈ ಮಾತುಗಳನ್ನು ಅನುಸರಿಸುವುದು ಸೂಕ್ತ

## ೨. ಒಂಭತ್ತು ಇತರೇ ಯೋಗ್ಯ ಮಾತುಗಳು :

ಮೇಲೆ ತಿಳಿಸಿರುವವುಗಳ ಜೊತೆಗೆ ಈ ಒಂಭತ್ತು ಮಾತುಗಳನ್ನೂ ಸೇರಿಸಿಕೊಳ್ಳಬೇಕು ಇದು ಅಭ್ಯಾಗತರಿಗೆ ಸಂಬಂಧಪಟ್ಟ ವಿಷಯ

೧) ಅಭ್ಯಾಗತನಿಗೆ ಸ್ಥಾನ ನೀಡುವುದು, ೨) ಕುಡಿಯಲು ನೀರು ನೀಡುವುದು, ೩) ಆಸನ ಕೊಡುವುದು, ೪) ಕಾಲು ತೊಳೆಯುವುದು, ೫) ಸ್ನಾನಕ್ಕೆ ಮೊದಲು ಎಣ್ಣೆ ನೀಡುವುದು, ೬) ವಿಶ್ರಾಂತಿಗೆ ಸ್ಥಳ ನೀಡುವುದು, ೭) ಶಯನಕ್ಕೆ ಅನುಕೂಲ ಮಾಡಿಕೊಡುವುದು, ೮) ಯಥಾಶಕ್ತಿ ಭೋಜನ ನೀಡುವುದು, ೯) ಶುಚಿತೆಗೆ ಮಣ್ಣು ಮತ್ತು ನೀರು ನೀಡುವುದು, ಅಭ್ಯಾಗತನನ್ನು ಬರಿ ಹೊಟ್ಟೆಯಲ್ಲಿ ಎಂದಿಗೂ ಮಲಗಿಸಬಾರದು

ಈ ಪದ್ಧಾನಾನಿ ಚಾನ್ಯಾನಿ
ಭೂಮಿರಾಪಸ್ತೃಣಾನಿ ಚ
ಪಾದ ಶೌಚಂ ತಥಾಭ್ಯಂಗ
ಮಾಶ್ರಯಃ ಶಯನಂ ತಥಾ
ಕಿಂಚಿಚ್ಚಾನ್ನಂ ಯಥಾಶಕ್ತಿ
ನಾಸ್ಯಾನ ಶ್ನನನ್ ಗೃಹೇ ವಸೇತ್
ಮೃಜ್ಜಲಂ ಚಾರ್ಥಿನೇ ದೇಯ
ಮೇತಾನ್ಯಪಿ ಸದಾ ಗೃಹೇ

(ದಕ್ಷ ೩/ ೬-೭)

ಈ ಸಂಬಂಧದಲ್ಲಿಯೂ ಗೃಹಸ್ಥನ ಎಚ್ಚರಿಕೆಯಿಂದ ಇರಬೇಕು ಈ ಆಧುನಿಕ ಯುಗದಲ್ಲಿ ಮೋಸದ ಸೋಗಿನಿಂದ ಬರುವವರು ಬಹಳ ಜನರಿರುತ್ತಾರೆ ಮನೆಯಲ್ಲಿ ಒಂಟಿ ಹೆಂಗಸು ಇದ್ದಾಗ ನೀರು ಕೇಳಲು ಬಂದು, ದರೋಡೆ ಮಾಡಿರುವ ಉದಾಹರಣೆಗಳು ಹಲವಿವೆ ಆದುದರಿಂದ ವಿವೇಚನಾಯುತರಾಗಿ, ಬಂದಿರುವ ಅಭ್ಯಾಗತನ ಮುಖ ಲಕ್ಷಣಗಳಿಂದ ಅವನ ಸ್ವಭಾವನ್ನರಿತು, ಮನೆಯಲ್ಲಿ ಗಂಡಸರಿರುವಾಗ ಈ ಉಪಚಾರಗಳನ್ನು ಮಾಡುವುದು ಸೂಕ್ತ ಮಾನವತ್ವವಿರಬೇಕು, ಆದರೆ ಸ್ವತಃ ಮೋಸ ಹೋಗಬಾರದು, ಹಾನಿಗೆ ಒಳಗಾಗಬಾರದು.

## ೩. ಒಂಭತ್ತು ಅವಶ್ಯಕ ಕರ್ಮಗಳು :

ಈ ಒಂಭತ್ತು ಕರ್ಮಗಳನ್ನು ದ್ವಿಜರು ತಪ್ಪದೆ ಮಾಡಬೇಕಾದುದು ಅವಶ್ಯಕ-



**ಗೋ ಪೂಜೆ**

ಸೆಪ್ಟೆಂಬರ್ 3 ನೇ ದಿನಾಂಕದಂದು ತಿ ತಿ ದೇ ಗೋಶಾಲೆಯಲ್ಲಿ ಕೃಷ್ಣಜನ್ಮಾಷ್ಟಮಿ ಸಂದರ್ಭದಲ್ಲಿ ಗೋಪೂಜೆ ಯಶಸ್ವಿಯಾಗಿ ನಡೆಯಿತು. ಗೋಶಾಲೆಯಲ್ಲಿರುವ ಶ್ರೀಕೃಷ್ಣ ವಿಗ್ರಹಕ್ಕೆ ಶಾಸ್ತ್ರೋಕ್ತವಾಗಿ ಪೂಜೆಗಳನ್ನು ನಡೆಸಲಾಯಿತು ಅನ್ನಮಾಚಾರ್ಯ ಕಲಾವಿದರು ಕೀರ್ತನ ಸೇವೆ ಸಮರ್ಪಿಸಿದರು

೧) ಸ್ನಾನ, ೨) ಸಂಧ್ಯಾವಂದನೆ, ೩) ಜಪ, ೪) ಹೋಮ, ೫) ಸ್ವಾಧ್ಯಾಯ, ೬) ದೇವಪೂಜನ, ೭) ಬಲಿ ವೈಶ್ವದೇವ, ೮) ಅತಿಥಿ ಸೇವೆ ಮತ್ತು ೯) ಯಥಾಶಕ್ತಿ ದೇವ - ಪಿತೃ - ಮನುಷ್ಯ ದೀನ, ಅನಾಥ, ತಪಸ್ವೀ, ಮಾತಾ - ಪಿತಾ - ಗುರು ಇತ್ಯಾದಿಯವರಿಗೆ ಯಥಾವಿಧಿ, ಯಥಾಯೋಗ್ಯ ಭೋಜನ ಹಾಗೂ ಜಲಾಂಜಲಿಯಿಂದ ಸಂತುಷ್ಟಗೊಳಿಸುವುದು

ಸ್ನಾನಂ ಸಂಧ್ಯಾಂ ಜಪೋ ಹೋಮಃ
ಸ್ವಾಧ್ಯಾಯೋ ದೇವತಾರ್ಚನಂ
ವೈಶ್ವದೇವಂ ತಥಾ ತಿಥ್ಯಂ
ಉಧೃತಂ ಚಾಪಿ ಶಕ್ತಿತಃ
ಪಿತೃದೇವಮನುಷ್ಯಾಣಾಂ
ದೀನಾನಾಥ ತಪಸ್ವಿನಾಮ್
ಮಾತಾ ಪಿತೃ ಗುರುಣಾಂ ಚ
ಸಂವಿಭಾಗೋ ಯಥಾರ್ಹತಃ

(ದಕ್ಷ ೩/೮-೯)

ಸಮಯದ ತುಟ್ಟಿಯಿಂದ ಹೋಮ ಇತ್ಯಾದಿಗಳನ್ನು ಈಗಿನ ಕಾಲದಲ್ಲಿ ಪ್ರತಿದಿನ ಮಾಡುವುದು ಕಷ್ಟವಾದರೂ, ಮನೆಯಲ್ಲಿ ವಿಶೇಷ ಸಂದರ್ಭಗಳಲ್ಲಿ ಈ ಅಗ್ನಿಕಾರ್ಯವನ್ನು ಮಾಡಿಸಬಹುದು ಉಳಿದವುಗಳನ್ನು ತಪ್ಪದೆ ನಿರ್ವಹಿಸಬೇಕು ಅದಕ್ಕೆ ತಕ್ಕಂತೆ ಸಮಯವನ್ನು ಹೊಂದಿಸಿಕೊಳ್ಳಬೇಕು

## ೪. ಒಂಭತ್ತು ಮಾಡಬಾರದ ಕೆಲಸಗಳು :

ಇವನ್ನು ವಿಕರ್ಮ ಅಥವಾ ನಿಂದಿತ ಕರ್ಮಗಳೆಂದು ಕರೆಯುತ್ತಾರೆ ಇವು ತ್ಯಾಜ್ಯವಾದವುಗಳು ಸದ್ಗೃಹಸ್ಥನು ಈ ನಿಂದಿತ ಕರ್ಮಗಳನ್ನು ಎಂದೆಂದಿಗೂ, ಮರೆತೂ ಆಚರಿಸಬಾರದು

೧) ಸುಳ್ಳು ಹೇಳುವುದು, ೨) ಇತರೆ ಹೆಂಗಸರನ್ನು (ಪರಸ್ತ್ರೀಯನ್ನು) ಒಲಿಸಿಕೊಳ್ಳಲು ಪ್ರಯತ್ನಿಸುವುದು, ೩) ತಿನ್ನ ಬಾರದುದನ್ನು ತಿನ್ನುವುದು (ಅಭಕ್ಷ್ಯಭಕ್ಷಣ), ೪) ಅಗಮ್ಯಾಗಮನ (ಮಾಡಬಾರದುದನ್ನು ಮಾಡುವುದು), ೫) ಅಪೇಯ-ಪಾನ, ೬) ಹಿಂಸೆ ಕೊಡುವುದು, ೭) ಕಳ್ಳತನ ಮಾಡುವುದು, ೮) ವೇದಬಾಹ್ಯ ಕರ್ಮಗಳನ್ನು ಮಾಡುವುದು ಮತ್ತು ೯) ಮಿತ್ರಧರ್ಮದ ನಿರ್ವಹಣೆಯನ್ನು ಮಾಡದಿರುವುದು

ಅಶ್ರುತೇಃ
ತಥಾಭಕ್ಷ್ಯಸ್ಯ ಭಕ್ಷಣಮ್
ಅಗಮ್ಯಾಗಮನಾಪೇಯಂ
ಹಿಂಸಾಸ್ತೇಯಂ ತಥೈವ ಚ
ಅಶ್ರೌತ ಕರ್ಮಾಚರಣಂ
ಮಿತ್ರಧರ್ಮ ಬಹಿಷ್ಕೃತಮ್
ನವೈತಾನಿ ವಿಕರ್ಮಾಣಿ
ತಾನಿ ಸರ್ವಾಣಿ ವರ್ಜಯೇತ್
(ದಕ್ಷ ೩/೧೦-೧೨)

ಇಂದಿನ ವೈಜ್ಞಾನಿಕ ಹಾಗೂ ವೇಗದ ಯುಗದಲ್ಲಿ ಇವನ್ನು ಅನುಸರಿಸುವುದು ಕಷ್ಟವೇನಲ್ಲ ಮನಸ್ಸು ಮಾಡಬೇಕಷ್ಟೆ. ಪ್ರತಿಯೊಬ್ಬ ಭಾರತೀಯನೂ ತಪ್ಪದೆ ಅನುಸರಿಸಿ, ಬೇರೆ ದೇಶಗಳಿಗೆ ಆದರ್ಶನಾಗಿರಬೇಕು

## ಒಂಭತ್ತು ಪ್ರಚ್ಛನ್ನ ಗೋಪ್ಯ (ಮಾಡಬೇಕಾದ) ವಿಷಯಗಳು :

ಈ ಒಂಭತ್ತು ಮಾತುಗಳು ಪರಮ ಗೋಪನೀಯವಾದವುಗಳು ಇವುಗಳನ್ನು ಇತರರಿಗೆ ತಿಳಿಯುವಂತೆ ಮಾಡಬಾರದು

೧) ತನ್ನ ವಯಸ್ಸು, ೨) ಸ್ವಂತ ಇಟ್ಟುಕೊಂಡಿರುವ ಹಣ, ೩) ಮನೆಯಲ್ಲಿನ ಒಡಕು, ಜಗಳ, ಮನಸ್ತಾಪಗಳು, ೪) ಮಂತ್ರ, ೫) ಸಂಭೋಗ, ೬) ಔಷಧಿ, ೭) ತಪಸ್ಸು, ೮) ನೀಡಿದ ದಾನ ಮತ್ತು ೯) ಹೊಂದಿದ ಅವಮಾನ-

ಆಯುರ್ವಿತ್ತಂ ಗೃಹಚ್ಛಿದ್ರಂ
ಮಂತ್ರ ಮೈಥುನ ಭೇಷಜಮ್
ತಪೋ ದಾನಾವಮಾನೀ ಚ
ನವ ಗೋಪ್ಯಾನಿ ಯತ್ನತಃ
(ದಕ್ಷ ೩/ ೧೨-೧೩)

ಈ 'ನವಕ' ಎಷ್ಟೊಂದು ಸೊಗಸಾಗಿದೆ ನೋಡಿ, ಇಂದಿನ ವೈಜ್ಞಾನಿಕ ಯುಗಕ್ಕೆ ಎಷ್ಟೊಂದು ಅಚ್ಚುಕಟ್ಟಾಗಿ ಹೊಂದಿಕೊಳ್ಳುತ್ತದೆ ಎಂಬುದನ್ನು ಆಧುನಿಕತಜ್ಞರು ಗಮನಿಸಬೇಕು

## ೬. ಒಂಭತ್ತು ಬೆಳಕಿಗೆ ಬರಬೇಕಾದ ವಿಷಯಗಳು :

ಈ ಮಾತುಗಳು ಗೃಹಸ್ಥನು ತಪ್ಪದೆ ಪ್ರಕಟಿಸಬೇಕಾದ, ಹತ್ತು ಜನಕ್ಕೆ ತಿಳಿಯಪಡಿಸಬೇಕಾದ ವಿಚಾರಗಳಾಗಿವೆ. ಇವುಗಳನ್ನು ಬಚ್ಚಿಡಬಾರದು-

೧) ಪ್ರಾಯೋಗ್ಯ (ಸಾಲ ತೆಗೆದುಕೊಳ್ಳುವ ವಿಚಾರ), ೨) ಋಣಶುದ್ಧಿ (ಸಾಲ ತೀರಿಸುವ ವಿಚಾರ), ೩) ದಾನದಲ್ಲಿ ಸೇರಿಸಿದ ವಸ್ತುಗಳು, ವಸ್ತುಗಳ ದಾನದ ವಿಚಾರ, ೪) ಅಧ್ಯಯನ, ೫) ವ್ಯಾಪಾರ ಮಾಡಿದ ವಸ್ತುಗಳು, ೬) ಕನ್ಯಾದಾನ (ಮದುವೆ), ೭) ವೃಷೋತ್ಸರ್ಗ, ೮) ಏಕಾಂತದಲ್ಲಿ ಮಾಡಿದ ಪಾಪ ಹಾಗೂ ೯) ನಿಂದನೀಯವಲ್ಲದ ಕೆಲಸ-

ಪ್ರಾಯೋಗ್ಯಮೃಣಶುದ್ಧಿಶ್ಚ
ದಾನಾಧ್ಯಯನ ವಿಕ್ರಯಾಃ
ಕನ್ಯಾದಾನಂ ವೃಷೋತ್ಸರ್ಗೋ
ರಹಃ ಪಾಪಮಕುತ್ಸಿಕಮ್
(ದಕ್ಷ ೩/೧೩-೧೪)

ಇದೂ ಕೂಡ ಐದನೆಯದರಷ್ಟೇ ಮಹತ್ವವಾದುದು

## ೭. ಒಂಭತ್ತು ಅಕ್ಷಯ ಸಫಲ ಮಾತುಗಳು :

ಈ ಒಂಭತ್ತು ಜನರು ಸಮಾಜಕ್ಕೆ ಅಮೂಲ್ಯರಾದವರು-

೧) ತಾಯಿ, ೨) ತಂದೆ, ೩) ಗುರು, ೪) ಮಿತ್ರ ೫) ವಿನಯವಂತನು, ೬) ಉಪಕಾರ ಮಾಡುವವನು, ೭) ದೀನನು, ೮) ಅನಾಥನು ಹಾಗೂ ೯) ಸಜ್ಜನ ಸಾಧು ಮಹಾತ್ಮ ವ್ಯಕ್ತಿ-

ಮಾತಾಪಿತ್ರೋ ಗುರೌ ಮಿತ್ರೇ
ವಿನೀತೇ ಚೋಪಕಾರಿಣಿ
ದೀನನಾಥವಿಶಿಷ್ಟೇಭ್ಯೋ
ದತ್ತಂತು ಸಫಲಂ ಭವೇತ್
(ದಕ್ಷ ೩/೧೫)

ಮೇಲೆ ತಿಳಿಸಿದವರು ಏನನ್ನೇ ನೀಡಲಿ, ಅದು ಅಕ್ಷಯವೂ, ಸಫಲವೂ ಆಗುವುದು

## ೮. ಒಂಭತ್ತು ನಿಷ್ಫಲ ಮಾತುಗಳು :

ಈ ಕೆಳಗೆ ತಿಳಿಸಿರುವ ಒಂಭತ್ತು ರೀತಿಯ ವ್ಯಕ್ತಿಗಳಿಗೆ ಏನನ್ನು ನೀಡಿದರೂ ಅದು ನಿಷ್ಫಲವೇ ಆಗುತ್ತದೆ-

೧) ಧೂರ್ತ, ೨) ಬೈದಿ, ೩) ಮೂರ್ಖ, ೪) ಅಯೋಗ್ಯ ವೈದ್ಯ ೫) ಜೂಜುಕೋರ, ೬) ರಕ್ಕ (ಮೋಸಗಾರ), ೭) ಸುಳ್ಳು (ಮುಖ) ಸ್ತುತಿ ಮಾಡುವವನು, ೮) ಅನವಶ್ಯಕ ಪ್ರಶಂಸೆ ಮಾಡುವ ಭಟ್ಟಂಗಿ ಹಾಗೂ ೯) ಕಳ್ಳ-

ಧೂರ್ತೇ ವಂದಿನಿ ಮಂದೇ ಚ
ಕುವೈದ್ಯೇಕಿತವೇ ಶಠೇ
ಚಾಟುಚಾರಣ ಚೌರೇಭ್ಯೋ
ದತ್ತಂ ಭವತಿ ನಿಷ್ಫಲಮ್
೩-೧೬

ಈ ಮಾತು ಇಂದಿನ ಸಮಾಜದಲ್ಲೂ ನಿಜವಾಗಿದೆ ಇಂತಹವರಿಗೆ ಏನನ್ನು ನೀಡಿದರೂ ವ್ಯರ್ಥವೆ!

## ೯. ಆಪತ್ತಿನಲ್ಲಿಯೂ ಇತರರಿಗೆ ನೀಡದ ವಸ್ತುಗಳು :

ಆಪತ್ತಿನ ಸಮಯದಲ್ಲಿಯೂ ಇತರರಿಗೆ ನೀಡದ ಕೆಲವು ವಸ್ತುಗಳಿವೆ ಮೂಢನಾದವನು ಇವುಗಳನ್ನು ನೀಡಿದರೂ ಕೂಡ ಪ್ರಾಯಶ್ಚಿತ್ತದಿಂದಲೂ ಅವನು ಶುದ್ಧನಾಗುವುದಿಲ್ಲ ಅವುಯಾವುವೆಂದರೆ-

೧) ಎಲ್ಲರಿಗೂ ಅನ್ವಯವಾಗುವಂತಹ ಸಾರ್ವಜನಿಕ ಸಂಪತ್ತು, ೨) ಚಂದಾದಲ್ಲಿ ಪಡೆದ ಹಣ ಅಥವಾ ವಸ್ತುಗಳು, ೩) ಇತರರಿಗೆ ನೀಡುವುದಕ್ಕಾಗಿ ಪಡೆದಿರುವ ವಸ್ತು (ಅಮಾನತ್ತಿಗಾಗಿ ನೀಡಿರುವ ಸಂಪತ್ತು), ೪) ದೇವಾಲಯೇತ್ಯಾದಿಗಳಿಗೆ ದಾನವಾಗಿ ನೀಡಿರುವ ಕಟ್ಟಡ ನಿರ್ಮಾಣ ವಸ್ತುಗಳು, ೫) ತನ್ನ ಹೆಂಡತಿ, ೬) ಪತ್ನಿಯ ಧನ, ೭) ಜಾಮೀನಿನ ಹಣ, ೮) ಅಮಾನತ್ತಿನಲ್ಲಿರಿಸಿಕೊಂಡಿರು ವ ವಸ್ತುಗಳು ಹಾಗೂ ೯) ಪಿತ್ರಾರ್ಜಿತವಾಗಿ ಬಂದಿರುವ ಸಂಪತ್ತು-

ಸಾಮಾನ್ಯಂ ಯಾಚಿತಂ
ನ್ಯಸ್ತಮಾಧಿರ್ದಾರಾಶ್ಚ ತದ್ಧನಮ್
ಅನ್ವಾಹಿತಂ ಚ ನಿಕ್ಷೇಪಃ
ಸರ್ವಸ್ವಂ ಚಾನ್ವಯೆ ಸತಿ
(ದಕ್ಷ ೩/೧೭)

ಈ ರೀತಿಯಲ್ಲಿ ದಕ್ಷಸ್ಮೃತಿಯಲ್ಲಿ ತಿಳಿಸಿರುವ ವ್ಯವಹಾರ - ಸಂಬಂಧದ ಈ ವ್ಯವಸ್ಥೆಯು ಅತ್ಯಂತ ಮಹತ್ವಪೂರ್ಣವಾದುದು.

16 ನೇ ಪುಟದಿಂದ

ತಪ್ಪದು - ಎಂದು ಬರೆದಿರುವ ಪಾದಗಳನ್ನು ಪದಗಳನ್ನು ಗಮನಿಸಿದರೆ, ಕನಕದಾಸರ ಕುಲ ದೈವತ ವೆಂಕಟೇಶನೇ ಮಹಾತ್ಮನಾದ ತಿರುಪತಿಯ ವೆಂಕಟೇಶ - ಆತನನ್ನು ಸ್ಮರಿಸುವುದರಿಂದಲೇ ಮುಕ್ತಿ ಸಾಧ್ಯ ಎಂಬ ವಿಪಯವನ್ನು ಈ ಕನಕದಾಸರು ತಮ್ಮ ಸ್ವಾನುಭವಕ್ಕೆ ತಂದುಕೊಂಡಿರುವುದು ವಿಧಿತವಾಗುತ್ತದೆ ಮತ್ತೆ ಈ ಕೀರ್ತನೆಯಲ್ಲಿ "ಗುತ್ತೆಯ ಎಲ್ಲಮ್ಮ" ಇತ್ಯಾದಿ ದೇವತೆಗಳ ಉಲ್ಲೇಖವಿರುವುದರಿಂದ, ಇದನ್ನು ಶ್ರೀನಿವಾಸನ ಸನ್ನಿಧಿಯಲ್ಲಿಯೇ ಬರೆದು ಅಲ್ಲಿಯೇ ತಿರುಪತಿಯ ವೆಂಕಪ್ಪನಿಗೆ ಒಪ್ಪಿಸಿರುವ ಕೀರ್ತನೆಯಾಗಿದೆಯೆಂದು ಊಹಿಸಲು ಸಾಧ್ಯವಿದೆ ಹಾಗು ಇದು ರುಜುವಾತು ಕೂಡ

೫ (ಹಾಡು ೧೬೮),

ಪೂಸರನ ಜನಕನೇ ಶತಕೋಟಿ ತರಣಿ ಪ್ರ
ಕಾಶ ಅಗಣಿತ ಕೋಟಿ, ಬ್ರಹ್ಮಾಂಡ ನಾಯಕನೆ
ವಾಸವಮರಾಳಿ ಪರಮೇಷ್ಟಿ ವಂದಿತ ವೆಂಕ
ಟೇಶ ನೊಲಿದುಪ್ಪವಡಿಸಯ್ಯಾ ಹರಿಯೆ

- ಎಂಬ ಪಲ್ಲವಿಯೊಡನೆ ಆರಂಭವಾಗುವ ಈ ಉದಯ ಗೀತೆಯಲ್ಲಿ ವೆಂಕಟೇಶನ ಮಹಾತ್ಮಗಳಲ್ಲಿ ಪ್ರಮುಖವಾದವುಗಳನ್ನು ಒಂದೊಂದಾಗಿ ಎತ್ತಿ ಹಾಡಿ, ಪರಮಾತ್ಮನನ್ನು, 'ಉಪ್ಪವಡಿಸಯ್ಯ' ಎಂದು ಕನಕದಾಸರು ಹೇಳುವ ರೀತಿ ಅದ್ಭುತವಾದದ್ದು. ಕೊನೆಯಲ್ಲಿ ಈ ಕೀರ್ತನೆಯು

ಪೊಡವಿಪತಿ ವೈಕುಂರ-
ವೆನಿಪ ಶೇಪಾದ್ರಿಯೊಳು
ಸಡಗರದಿ ಒಲಿದು ಭಕ್ತರನು
ಪಾಲಿಪ ಕಾಗಿನೆಲೆಯಾದಿಕೇಶವ ಜಗ
ದೊಡೆಯ ತಿರುವೆಂಕಟೇಶ ಜಗದೀಶ
ಒಲಿದುಪ್ಪವಡಿಸೊ ಹರಿಯೆ

- ಎಂಬ ನಾದಲಯದೊಡನೆ ಮುಕ್ತಾಯವಾಗುವಾಗ, ಭಕ್ತನ ಆರ್ತತೆಯು ಭಗವಂತನನ್ನು ಮುಟ್ಟಿ, ಆತನ ದೃಷ್ಟಿಯು ಭಕ್ತನ ಮೇಲೆ ವಾತ್ಸಲ್ಯದ, ಅರಳು ಮಳೆಯನ್ನು ಸುರಿಸಿ ಬಿಟ್ಟಿರುತ್ತದೆ ಇದರರ್ಥ, ಪರಮಾತ್ಮನೂ ನಿದ್ದೆ ಮಾಡುತ್ತಿರುತ್ತಾನೆ ಅವನಿಗೂ ದೇಹಾಲಸ್ಯ ಮರೆವು ಸಾಮಾನ್ಯ ಮನುಷ್ಯರಂತೆ ಅವನಿಗೂ ಇದ್ದೇ ಇರುತ್ತವೆ - ಆದ್ದರಿಂದ ಆತನನ್ನು 'ಉಪ್ಪವಡಿಸಯ್ಯ' ಎಂದು ಎಚ್ಚರಿಸದೇಕೆಂಬ ಮುಗ್ಧತೆಯು ಒಂದು ಪಾಡಾದರೆ - , ಇನ್ನೊಂದು, ನಾವು ಭಕ್ತರು ಎಚ್ಚರಾಗಿದ್ದೇವೆ ಎಂದು ಆತನ ಎಚ್ಚರಕ್ಕೆ ಮುಟ್ಟಿಸುವ ಭಾವದ ಪಾಡು ಇದು ಹೀಗಿರುವಾಗ ಆತನು ಮಲಗಿದರೆ ಸೃಷ್ಟಿ ನಡೆಯದೇಕಲ್ಲ, ಹೀಗೆಂಬುದು ನಮ್ಮ ತಿಳಿವಳಿಕೆಯ ನೆಲೆಯಾದರೆ, ಆತನ ನಡಗೆಯಲ್ಲಿ ನಮ್ಮ ಅಂಶವೂ ಇರದೇಕೆಂಬುದಕ್ಕೆ ಈ ಎಚ್ಚರಿಕೆಯ ಗೀತೆ ನಮಗೆ ಸದಾ ಎಚ್ಚರಿರುವ ಅವನಿಗಲ್ಲ ಇದು ಈ ದೃಷ್ಟಿಯಿಂದ ಈ ಕೀರ್ತನೆಯ ಒಳ-ಹೊರಗುಗಳನ್ನೆಲ್ಲ ನೋಡಿದಾಗ ಇದನ್ನು ಕನಕದಾಸರು ತಿರುಪತಿಯಲ್ಲಿಯೇ ರಚನೆ ಮಾಡಿರುವರೆಂಬುದಕ್ಕೆ ದೇರೆ ಸಾಕ್ಷಿಗಳೇ ದೇಕಿಲ್ಲ ಇದನ್ನು ಓದಿದೊಡನೆ ಎಂ ಎಸ್ ಸುಬ್ಬಲಕ್ಷ್ಮೀಯವರು ಹಾಡಿದ ವೆಂಕಟೇಶ ಸುಪ್ರಭಾತದ ನೆನಪೂ ಬರುತ್ತದೆ

ಹೀಗೆ ಕನಕದಾಸರ ಬದುಕು - ಬರಹಗಳ ಸಾಕ್ಷ್ಯಾಧಾರಗಳ ಮೇಲೆ ಇದುವರೆಗೆ ಪರಿಗಣಿಸಿದ ಅಂಶಗಳ ಹಿನ್ನೆಲೆಯಲ್ಲಿ, ಪಾಂಡವರು ಮತ್ತು ಕೃಷ್ಣನ ಸಖ್ಯದ ನೆಲೆಯಲ್ಲಿ ನೇಯ್ದುಕೊಂಡು ಬಂದ ಸಂಬಂಧಋಣಾನುಬಂಧ ಸ್ವಾನಂದಪರಿಜ್ಞಾನ, ನಿರ್ಮಲವಾದ ಪ್ರೀತಿ ವಿಶ್ವಾಸಗಳ ಅನುಬಂಧಗಳೆಲ್ಲ ಸಾಧಕರಿಗೆ ಆತ್ಮದರ್ಶಿಯಾಗುತ್ತವೆ ಈ ಆತ್ಮದರ್ಶಿತ್ವದಲ್ಲಿಯೇ ಪ್ರಸ್ತುತ ಕನಕದಾಸರ - ಶ್ರೀನಿವಾಸನ ಸಂಬಂಧಗಳ ಬಗ್ಗೆ ನಿಚ್ಚಳವಾದ ಪರಿಕಲ್ಪನೆಯೂ ಮೂಡಿಬರುತ್ತದೆ ಅದನ್ನಷ್ಟು ವಿಶ್ಲೇಷಿಸುವುದು ಸಮಂಜಸವೇ ಹೌದು

ನಮ್ಮ ಕನಕದಾಸರು ಯಮಧರ್ಮನ ಅಂಶವೆಂದು ಹೇಳುತ್ತಿರುವುದರಿಂದ, ಕನಕದಾಸರಲ್ಲಿ ಧರ್ಮರಾಯನ ಅಂಶವು ಇದ್ದಂತಾಯಿತು ಇನ್ನು ಶ್ರೀನಿವಾಸ, ವೆಂಕಟೇಶ, ಗೋವಿಂದ ಕೃಷ್ಣ, ನರಸಿಂಹ ಇತ್ಯಾದಿ ನಾಮಗಳೆಲ್ಲ ವಿಷ್ಣುವಿನ ಅಂಶದಿಂದ ಕೂಡಿದ ಅವತಾರಗಳು ವಸ್ತುಸ್ಥಿತಿಯು ಹೀಗಿರುವಾಗ ಕೃಷ್ಣ ಮತ್ತು ಶ್ರೀನಿವಾಸರು ಒಂದೇ ಅಂಶವೆಂದು ಹೇಳಲಾಗುವುದು ಈ ವಿವರಣೆಯನ್ನು ಪರಿಗಣಿಸಿದಾಗ, ಕೃಷ್ಣ ಶ್ರೀನಿವಾಸರು ಒಂದೇ ರೂಪದ ದೇರೆ ದೇರೆ ಹಸರುಗಳೆಂಬುದು ಸ್ಪಷ್ಟವಿಚಾರ ಅದೇ ರೀತಿ ಧರ್ಮರಾಯ ಕನಕವಾಸರೂ ಒಂದೇ ರೂಪದ ದೇರ ದೇರೆ ಹಸರುಗಳೆಂಬುದು ಅಷ್ಟೇ ಸ್ಪಷ್ಟದ ವಿಚಾರ ಇಂಥ ಈ ಅವತಾರಗಳು ಅರ್ಥಾತ್ ರೂಪಗಳು ಜಗತ್ತಿನ ಕಲ್ಯಾಣಕ್ಕಾಗಿ ಒಂದೇ ಅವಕಾಶದಲ್ಲಿ ಪೂರಕವಾಗಿ ಒಡಮೂಡುತ್ತಲೇ ಇರುತ್ತವ ಅಂತಯೇ ಈ ಪ್ರಕ್ರಿಯೆಯಲ್ಲಿ ಶ್ರೀನಿವಾಸನಿಷ್ಟಲ್ಲಿ ಧರ್ಮವಿರಲೇದೇಕು ಅಂತಹ ಧರ್ಮಸ್ವರೂಪವೇ ಕನಕವಾಸರು ಕೃಷ್ಣನೇ ಶ್ರೀನಿವಾಸ. ಇವರಿಬ್ಬರ ಸಖ್ಯಭಾವದಲ್ಲಿ ದೇವ - ಭಕ್ತ ಅನ್ಯೋನ್ಯವಾಗಿದ್ದಾರೆ ಇಂತಹ ಒಂದು ಸೊಗಸನ್ನು ಕನಕದಾಸರ ಬದುಕು ಬರಹಗಳಿಂದ ಎತ್ತಿ ಅರ್ಥಮಾಡಿಕೊಂಡಾಗ, ಶ್ರೀನಿವಾಸನ ದರ್ಶನದ ಆನಂದವು ಶಾಶ್ವತವಾದ ಸ್ವಾನಂದಕ್ಕೆ ಎಡಮಾಡಿಕೊಡುತ್ತದೆ

# ತಿ. ತಿ. ದೇ. ಶತಮಾನದ ವ್ಯಕ್ತಿ - ಅನ್ನಾರಾವ್

- ಬಿ. ಎನ್. ಶ್ರೀನಿವಾಸನ್.

ವಿಗ್ರಹ ಪ್ರತಿಷ್ಠಾಪನೆಯಲ್ಲಿ, ಆಲಯ ನಿರ್ಮಾಣದಲ್ಲಿ, ಆಲಯದ ಅರ್ಚಾಮೂರ್ತಿಯ ಪೂಜಾ ವ್ಯವಸ್ಥೆಯಲ್ಲಿ, ಆಲಯದ ಜೀರ್ಣೋದ್ಧಾರದಲ್ಲಿ, ಮಧ್ಯಯುಗೀನ ಭಾರತದಲ್ಲಿ ಮಹತ್ತರವಾದ ಪಾತ್ರ ವಹಿಸಿದ ವ್ಯಕ್ತಿವಿಶೇಷಗಳು ಅನೇಕ ಆಲಯಾರ್ಚನಾ ಪದ್ಧತಿಯನ್ನು ವ್ಯವಸ್ಥಿತಗೊಳಿಸಿದ ರಾಮಾನುಜರಿಂದ ಆರಂಭವಾಗುವ ಒಂದು ಸಾಲು ಪ್ರಾಣದೇವರ ವಿಗ್ರಹಪ್ರತಿಷ್ಠೆ ಮಾಡುತ್ತ ನಡೆದ ವ್ಯಾಸರಾಯರಲ್ಲಿ ಮುಂದುವರೆದು ಅವರ ಶಿಷ್ಯಪರಂಪರೆಯ ಕೃಷ್ಣದೇವರಾಯ ಅಚ್ಯುತ ರಾಯರಲ್ಲಿ ಹರಿದು ಬಂದದ್ದನ್ನು ಕಾಣಬಹುದು ಆಲಯ ನಿರ್ಮಾಣದ ಉತ್ತುಂಗವನ್ನು ಆ ಮೊದಲೇ ಪಲ್ಲವ ಚೋಳ ಹೊಯ್ಸಳರ ಕಾಲದಲ್ಲಿ ತಲುಪಿ ಆಗಿದ್ದಿತು ಎಂಬುದು ಇತಿಹಾಸ ಆದರೆ ಕಾಲದೋಷದಿಂದ ಜೀರ್ಣವಾದದ್ದರ ಪುನರುತ್ಥಾನವಾಗಿದ್ದು ಅಹಲ್ಯಾಬಾಯಿ ಹೋಳ್ಕರ್ ಅಂತಹವರ ನಿರಂತರವಾದ ಆಸಕ್ತಿ ಪ್ರಪತ್ತಿಗಳಿಂದ ಎಂಬುದನ್ನು ಮರೆಯುವಂತಿಲ್ಲ

ಈ ಒಂದು ಉದ್ಧಾರಕರ್ತ ಸಮಾಜ ಸೇವಕರ ಸಾಲಿನಲ್ಲಿ ಸೇರುವ ಇಪ್ಪತ್ತನೆಯ ಶತಮಾನದ ವ್ಯಕ್ತಿಯೆಂದರೆ ತಿರುಪತಿಯ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದಲ್ಲಿ ಅಧಿಕಾರಿಯಾಗಿ ಕೆಲಸ ನಿರ್ವಹಿಸಿದ ಚೆಲಿಕಾನಿ ಅನ್ನಾರಾಯರು ಎಂದು ಹೇಳಬೇಕು. ಧಾರ್ಮಿಕ ಸಾಹಿತ್ಯ ಪ್ರಸಾರದಲ್ಲಿ ಗೋರಖಪುರದ ಗೀತಾಪ್ರೆಸ್ ಪ್ರಸಿದ್ಧವಾಗಿ ಜನಾನುರಾಗಿಯಾಗಿ ಕೆಲಸಮಾಡಿದ್ದು, ಭಾರತದ ಭವ್ಯತೆಯ ಗುರುತಾಗಿದ್ದು ಮಧ್ಯಕಾಲದಲ್ಲಿ ಮರೆಯಾಗಿದ್ದ ಸೋಮನಾಥದ ಪುನರುತ್ಥಾನದಲ್ಲಿ ಸರ್ದಾರ ವಲ್ಲಭಭಾಯಿಯವರ ಮಹತ್ವದ ಪಾತ್ರ ಯಾರೂ ನೆನಪಿನಲ್ಲಿ ನಿರಂತರವಾಗಿಟ್ಟುಕೊಳ್ಳುವ ವಿಷಯಗಳೇ ಆಗಿದ್ದರೂ ಅನ್ನಾರಾಯರಿಗೆ ಪ್ರಾಮುಖ್ಯತೆ ಬರುವುದು ಆಲಯದ ಅಭಿವೃದ್ಧಿಯಿಂದ ಆಲಯಕ್ಕೆ ಆಗಮಿಸುವ ಭಕ್ತರ ಅಗತ್ಯಗಳನ್ನು ಪೂರೈಸಲು ಪ್ರಯತ್ನಿಸಿದ ಅವರ ದೂರದೃಷ್ಟಿ.

1908 ರಲ್ಲಿನ ಸೆಪ್ಟಂಬರ್ 8 ರಂದು ಬೊಬ್ಬಿಲಿಯಲ್ಲಿ ಹುಟ್ಟಿದ ಅನ್ನಾರಾಯರು ಸಂಯುಕ್ತ ಮದರಾಸು ರಾಜ್ಯದ ಮುಖ್ಯಮಂತ್ರಿ ಆಗಿದ್ದ ಬೊಬ್ಬಿಲಿ ರಾಜರ ಸೋದರಳಿಯ ಅನ್ನಾರಾಯರು ಪ್ರೌಢ ವಿದ್ಯಾಭ್ಯಾಸಕ್ಕೆ ಮದರಾಸಿಗೆ ಬಂದರು ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ರಸಾಯನ ಶಾಸ್ತ್ರದಲ್ಲಿ ಬಿ ಎ ಪದವಿಯನ್ನು 1930 ರಲ್ಲಿ ಪಡೆದರು ಪಾನುಗಂಟಿ ರಾಜ ಪಾರ್ಥಸಾರಥಿ ರಾಯನಿಂಗರ್ ಅವರ ಪುತ್ರಿ ಅನಸೂಯಾ ದೇವಿ ಅವರನ್ನು ವಿವಾಹವಾದರು ಸ್ವಲ್ಪಕಾಲ ಬೊಂಬಾಯಿನ ಲಕ್ಷ್ಮಿ ರಂಗಂ ತಾಮ್ರದ ಗಣಿಗಳಲ್ಲಿ, ಮದರಾಸಿನ ವಾಣಿಜ್ಯ ಸಂಸ್ಥೆಯಲ್ಲಿ, ನ್ಯೂಸ್ ಟೈಂಸ್ ಆಂಗ್ಲ ಪತ್ರಿಕೆಯಲ್ಲಿ ಕೆಲಸ ಉನ್ನತ ಹುದ್ದೆಗಳಲ್ಲಿ ಯಶಸ್ವಿಯಾಗಿ ಕೆಲಸ ನಿರ್ವಹಿಸಿದರಾದರೂ 1933 ರಲ್ಲಿ ತಿರುಪತಿಯತ್ತ ಸೆಳೆಯಲ್ಪಟ್ಟರು ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವನ್ನು ವಿಚಾರಣ ಕರ್ತರಾದ ಮಹಂತರ ಪರಿಧಿಯಿಂದ ತಪ್ಪಿಸಿ, ಮೂರು ವರ್ಷಗಳ ಅವಧಿಯಲ್ಲಿ ನಡೆಯುವ ಪ್ರಾಂತೀಯ ಸರ್ಕಾರದ ಒಬ್ಬ ಕಮಿಷನರ್ ಹಾಗೂ ಒಂದು ಧರ್ಮದರ್ಶಿ ಮಂಡಳಿ (ಕಮಿಟಿ)ಯ ಉಸ್ತುವಾರಿಗೆ ಒಪ್ಪಿಸುವ ತಿ ತಿ ದೇ ಕಾಯದೆ ಜಾರಿಗೆ ಬಂದಿತು ಆಗ ಕಮಿಷನರಿಗೆ ಆಪ್ತಸಹಾಯಕರಾಗಿ ಆಲಯ ಪೇಷ್ಕಾರ್ ಹುದ್ದೆಗೆ ಅನ್ನಾರಾಯರು ಬಂದು ಸೇರಿದರು ಅಲ್ಲಿಂದ ಮುಂದೆ 1949 ರಲ್ಲಿ ಅನ್ನಾರಾಯರನ್ನು ಕಮಿಷನರ್ ಆಗಿ ನೇಮಿಸಲಾಯಿತು 1951 ರಲ್ಲಿ ಹೊಸ ತಿ ತಿ ದೇ ನಿಯಮಾವಳಿಯಂತೆ ಅವರನ್ನು ಕಾರ್ಯನಿರ್ವಹಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಯಿತು ಆಗ ಕಾರ್ಯನಿರ್ವಹಣಾದಿಕಾರಿಗಳ ಅದಿಕಾರಕ್ಕೆ ಕಾಲಪರಿಮಿತಿ ಇರಲಿಲ್ಲವಾಗಿ ತಮ್ಮ ಐವತ್ತೆಂಟನೆಯ ವರ್ಷದ ವರೆಗೆ ಎಂದರೆ 1964 ರ ವರೆಗೆ ಅನ್ನಾರಾಯರು ಅದೇ ಹುದ್ದೆಯಲ್ಲಿ ಮುಂದುವರಿದು ನಿವೃತ್ತರಾದರು ಬಳಿಕ ಮೈಸೂರು ಸರ್ಕಾರದ ಮುಜರಾಯಿ ಇಲಾಖಾ ಸಲಹಾದಾರರಾಗಿ, ಪೂರಿ, ಕಾಶೀ, ದೇವಾಲಯಗಳ ಆಡಳಿತ ಸುಧಾ



ರಣೆಯಲ್ಲಿ ಹಾಗೂ ಉತ್ತರಪ್ರದೇಶ, ಕಾಶ್ಮೀರ ಸರ್ಕಾರಗಳ ಮುಜರಾಯಿ ಇಲಾಖೆಗಳ ಸಲಹೆಗಾರ ಸೇವೆಯನ್ನೂ ಯಶಸ್ವಿಯಾಗಿ ನಡೆಸಿಕೊಟ್ಟರು ನಂತರ 1974 ರಲ್ಲಿ ತಿ.ತಿ.ದೇ ಧರ್ಮಕರ್ತರ ಮಂಡಳಿಯ ಅಧ್ಯಕ್ಷರಾಗಿ 1979 ರ ವರೆಗೆ ಕಾರ್ಯ ನಿರ್ವಹಿಸಿದರು 1979 ರಲ್ಲಿ ಕಚೇರಿ ವೃತ್ತಿಯನ್ನು ಬಿಟ್ಟರೂ ಸಾಮಾಜಿಕ ಧಾರ್ಮಿಕ ಸ್ವಯಸೇವಾಸಂಸ್ಥೆಗಳನೇಕವುಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು, ತಿರುಪತಿಯ ಹಿರಿಯ ಪೌರದಲ್ಲಿ ಒಬ್ಬರಾಗಿ ಪರಿಗಣಿತರಾಗಿ ನಗರದ ಧಾರ್ಮಿಕ ಸಾಮಾಜಿಕ ತರ್ತುಗಳಿಗೆ ತೀವ್ರವಾಗಿ ಪ್ರತಿಸ್ಪಂದಿಸುತ್ತ 1999 ರ ವರೆಗೆ ನಿರಂತರ ಚಟುವಟಿಕೆಯಿಂದಿದ್ದರು.

ಅನ್ನಾರಾಯರಿಗೆ ಆಲಯದ ಚಟುವಟಿಕೆಗಳಲ್ಲಿ, ಅದರಂತೆಯೇ ಮಾನವಸೇವೆಯಲ್ಲಿ ಅತೀವ ಆಸಕ್ತಿ ಅವರು ಕಮಿಷನರ ಆಪ್ತಸ

ಹಾಯಕರಾಗಿ ಪೇಷ್ಕಾರರಾಗಿದ್ದಾಗಲೇ ತಿರುಮಲೆಯ ಸ್ವಾಮಿಗೆ ಚಿನ್ನದ ಶಂಖ ಚಕ್ರಗಳನ್ನು ತೊಡಿಸಲಾಯಿತು (1934) ಸ್ವಾಮಿಯ ಮೆರವಣಿಗೆಗೆ ಬೆಳ್ಳಿಯ, ಮರದ ರಥಗಳ ನಿರ್ಮಾಣವಾದವು (1942) ಮುಖ್ಯ - ಬೆಟ್ಟವನ್ನೇರಲು ಇದುವರೆಗೆ ಮಟ್ಟಕುಮಾರ ಅನಂತರಾಯನು ಹಾಕಿಸಿದ್ದ ಮೆಟ್ಟಿಲ ಹಾದಿಯಲ್ಲಿ ಕೈ ಹಿಡಿದು ನಡೆಯಲು ಜಿ.ಐ ಪೈಪ್‌ಗಳನ್ನು ಹಾಕಿಸಿದ್ದು ಒಂದು ಕಡೆಯಾದರೆ (1937) ಬೆಟ್ಟಕ್ಕೆ ಹೋಗಿ ಬರಲು ವಾಹನ ರಸ್ತೆಯನ್ನು 1944 ರಲ್ಲಿ ಏರ್ಪಡಿಸಿ ಅದರ ಮೇಲೆ ದೇವಸ್ಥಾನಗಳ ಬಸ್‌ಗಳನ್ನು ನಡೆಸಲಾಯಿತು ಕ್ರಮೇಣ ಈ ಬಸ್‌ಗಳು ತಿರುಪತಿಯ ಮೂಲಕ ಶ್ರೀಶೈಲಂ, ವಿಜಯವಾಡ, ಹೈದರಾಬಾದು, ಮದರಾಸು, ಬೆಂಗಳೂರುಗಳಿಗೂ ಹೋಗಿ ಬಂದು ಯಾತ್ರಿಕರಿಗೆ ನೇರ ಪ್ರಯಾಣದ ಸೌಲಭ್ಯವನ್ನೊದಗಿಸುವಂತಾಯಿತು ಸ್ವಾಮಿಗೆ ವಜ್ರಕಿರೀಟವನ್ನು 1945 ರಲ್ಲಿ ಮಾಡಿಸಲಾಯಿತು 1953 ರಲ್ಲಿ ಸ್ವಾಮಿಯ ವೈಕುಂಠ ಹಸ್ತಕ್ಕೆ ವಜ್ರಕವಚ ತೊಡಿಸಲಾಯಿತು ತಿರುಪತಿ ತಿರುಮಲೆಗಳಲ್ಲಿ ಧರ್ಮಶಾಲೆಗಳ ನಿರ್ಮಾಣವಾಯಿತು ಭಕ್ತರಿಂದ ದಾನಗಳನ್ನು ಸ್ವೀಕರಿಸಿ ತಿರುಮಲೆಯಲ್ಲಿ ಕಾಟೇಜುಗಳ ನಿರ್ಮಾಣವಾಯಿತು

ಈಗಲೂ ತಿ ತಿ ದೇ ಕ್ಯಾಲೆಂಡರುಗಳಲ್ಲಿ ಭಾರತಾದ್ಯಂತ ಇರುವ ಶ್ರೀ ವೆಂಕಟೇಶ್ವರಸ್ವಾಮಿಯ ಚಿತ್ರವೆಂದರೆ 1953 ರಲ್ಲಿ ಚಿತ್ರಿಸಿದ್ದೇ ಆಗಿದೆ ಜೊತೆಗೇ ಹಿಂದೆ ಕಾಲಾಂತರದಲ್ಲಿ ನಿಂತು ಹೋಗಿದ್ದ ಪವಿತ್ರೋತ್ಸವವೇ ಮೊದಲಾದ ಉತ್ಸವಗಳನ್ನು ಆಲಯದಲ್ಲಿ ಪುನಃ ವ್ಯವಸ್ಥಿತವಾಗಿ ನಡೆಯುವಂತೆ ಆರಂಭಿಸಲಾಯಿತು (1958) ಶ್ರೀ ಗೋವಿಂದರಾಜಸ್ವಾಮಿ ಆಲಯ, ಶ್ರೀ ಕೋದಂಡರಾಮಸ್ವಾಮಿ ಆಲಯ, ಶ್ರೀ ಪದ್ಮಾವತೀ ಅಮ್ಮನವರ ಆಲಯಗಳಲ್ಲಿ ಜೀರ್ಣೋದ್ಧಾರದ ಕೆಲಸ ನಡೆಸಲಾಯಿತು ಮುಖ್ಯವಾಗಿ ಶ್ರೀ ಗೋವಿಂದರಾಜಸ್ವಾಮಿ ಆಲಯದಲ್ಲಿ ಮುಚ್ಚಿಹೋಗಿದ್ದ ಪಾರ್ಥಸಾರಥಿ ಆಲಯದ ಬಾಗಿಲು ತೆರೆಸಿ ಪೂಜೆಗೆ ಅನುವು ಮಾಡಿದ್ದಾಯಿತು ತಿರುಮಲೆಯ ಆಲಯದ ಮುಕುರ ಮಂಟಪದಲ್ಲಿ ಕನ್ನಡಿಗಳನ್ನಳವಡಿಸಿ ಸ್ವಾಮಿಯ ಉಯ್ಯಾಲೆ ಉತ್ಸವಕ್ಕೆ ಸೊಬಗು ನೀಡಲಾಯಿತು ಈ ಕಾಲದಲ್ಲಿಯೇ 1961 ರಲ್ಲಿ ಎರಡನೇ ಘಾಟ್ ರಸ್ತೆಗೆ ಅಡಿಗಲ್ಲನ್ನು - ಶಂಕುಸ್ಥಾಪನೆಯನ್ನು ಮಾಡಲಾಯಿತು ಶ್ರೀ ವೆಂಕಟೇಶ್ವರ ಸುಪ್ರಭಾತವನ್ನು ಎಚ್ ಎಂ ವಿ ಅವರ ಕಡೆಯಿಂದ ರೆಕಾರ್ಡ್ ಮಾಡಿಸಲಾಯಿತು

ಇವೆಲ್ಲ ನೇರ ಯಾತ್ರಿಕಾವಸರಕ್ಕೆ ಭಕ್ತಿ ಆರಾಧನೆಗಳಿಗೆ ಸಂಬಂಧಿಸಿದ್ದಾರೆ, ಇನ್ನೂ ಸ್ವಲ್ಪ ಮುಂದುವರೆದು ಮಾನವ ಸೇವೆಯೇ ಮಾಧವ ಸೇವೆ ಎಂಬ ಸೂತ್ರವಲ್ಲಿ ಹಲವಾರು ಸಾಂಘಿಕ ಸಾಮಾಜಿಕ ಅಭಿವೃದ್ಧಿ ಕಾರ್ಯಗಳಲ್ಲಿಯೂ ತಿ ತಿ ದೇ ಪೂರ್ಣ ಆಸಕ್ತಿಯಿಂದ ತೊಡಗಿಸಿಕೊಳ್ಳುವಂತಾಯಿತು ತಿರುಪತಿಯಲ್ಲಿ ಒಂದು ಅನಾಥ ಮಕ್ಕಳ ಬಾಲಮಂದಿರವನ್ನು, ಕುಷ್ಠರೋಗಿಗಳ ಪುನರಾವಾಸ ಕೇಂದ್ರವನ್ನೂ ಸ್ಥಾಪಿಸಲಾಯಿತು ಶ್ರೀ ವೆಂಕಟೇಶ್ವರ ರೂಯಾ ಆಸ್ಪತ್ರೆ ಆ ಮೂಲಕವಾಗಿ ವೈದ್ಯಕೀಯ ವಿದ್ಯಾಲಯ, ವೇದಪಾಠ ಶಾಲೆ, ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಗಳನ್ನೂ, ಗಂಡುಮಕ್ಕಳ ಕಾಲೇಜು, ಕೇಂದ್ರೀಯ ಸಂಸ್ಕೃತ ವಿದ್ಯಾಶಾಲೆ, ಎಲ್ಲಕ್ಕಿಂತ ಮುಖ್ಯವಾಗಿ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯ ಸ್ಥಾಪನೆಯಲ್ಲಿ ತಿ ತಿ ದೇವಂತಿಗೆ ಅತಿಪ್ರಮುಖವೆಂದು ಪರಿಗಣಿತವಾಗಲು ಕಾರಣ ಅನ್ನಾರಾಯರೆಂದಾಯಿತು ತಿರುಪತಿಯಲ್ಲಿ ಶ್ರೀ ವೆಂಕಟೇಶ್ವರ ಸಂಗೀತ ನೃತ್ಯ ಕಲಾಶಾಲೆಗಳ ಸ್ಥಾಪನೆಯಲ್ಲಿಯೂ, ಶಿಲ್ಪಕಲಾಶಾಲೆ ಸ್ಥಾಪನೆಯಲ್ಲಿಯೂ ಅನ್ನಾರಾಯರ ಪಾತ್ರ ಪ್ರಮುಖವಾಗುತ್ತದೆ ಮದರಾಸು, ಹೈದರಾಬಾದು, ಬೆಂಗಳೂರು, ದೆಹಲಿಗಳಲ್ಲಿ ತಿ ತಿ ದೇ ವಿಚಾರಣಾಕೇಂದ್ರಗಳನ್ನು ರೂಪಿಸಲಾಯಿತು ಕಟ್ಟಡಗಳು, ಸೇವೆಗಳು, ಪದ್ಧತಿಗಳು - ಇವೆಲ್ಲ ಒಂದು ಕಡೆಯ ಕಾರ್ಯಚಟುವಟಿಕೆಗಳ ಅಂಗವಾದರೆ ಇನ್ನೊಂದು ದಿಕ್ಕಿನಲ್ಲಿ ನಡೆದ ಸಾಹಿತ್ಯಸೇವೆ ಅಷ್ಟೇ ಪ್ರಮುಖವಾದದ್ದು ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯ ವತಿಯಿಂದ ಹಲವು ಹನ್ನೊಂದು ಅಮೂಲ್ಯ ಕೃತಿಗಳನ್ನು ಪ್ರಕಟಿಸಿದ್ದೇ ಅಲ್ಲದೆ, ತಿ ತಿ ದೇವಾಲಯಗಳ ವಿಷಯವನ್ನು ವರದಿಗಳನ್ನು ಭಕ್ತರಿಗೆ ತಲುಪುವಂತಾಗಿಸಲು ಇಂದಿನ ಸಪ್ತಗಿರಿಯ ಪೂರ್ವಾವತಾರವಾದ ತಿ ತಿ ದೇವಸ್ಥಾನಗಳ ಬುಲೆಟಿನ್ ಅನ್ನೂ ಆರಂಭಿಸಿದರು (1949) ಸಾಧು ಸುಬ್ರಹ್ಮಣ್ಯಶಾಸ್ತ್ರಿಗಳು ತಿ ತಿ ದೇ ಶಾಸನಗಳ ಅಧ್ಯಯನವನ್ನು ನಡೆಸಿಕೊಡುತ್ತಿದ್ದಂತೆ ಅವುಗಳ ಪ್ರಕಟನೆಯನ್ನು ಸಾಂಗವಾಗಿಸಿದರು ಮಾನವಲ್ಲಿ ರಾಮಕೃಷ್ಣ ಕವಿಗಳು ಭರತ ನಾಟ್ಯದ ಬಗ್ಗೆ ಸಂಕಲಿಸಿ ಸಂಪಾದಿಸಿದ ಸಂಸ್ಕೃತ ಭರತ ಕೋಶವನ್ನು ಪ್ರಕಟಿಸಿದರು ಎಲ್ಲಕ್ಕಿಂತ ಮಿಗಿಲಾಗಿ ಅದುವರೆಗೆ ಇತಿಹಾಸಕ್ಕೆ ತಿಳಿಯದ ಅನ್ನಮಾಚಾರ್ಯರನ್ನು ಸಂಪುಟ ಸಂಪುಟಗಳಾಗಿ ಭಕ್ತ ಲೋಕಕ್ಕೆ ಪರಿಚಯ ಮಾಡಿಕೊಟ್ಟರು ಅನ್ನಮಾಚಾರ್ಯ ಸಾಹಿತ್ಯವನ್ನು - ತಾಳ್ಳಪಾಕ ಸಾಹಿತ್ಯವನ್ನು - ಹೊರತರುವಲ್ಲಿ ಕೆಲಸ ಮಾಡಿದ ಎಲ್ಲ ಪಂಡಿತರನ್ನೂ ಹುಡುಕಿ ಆದರಿಸಿದವರು ಅನ್ನಾರಾಯರೇ ಎಂದರೆ ಅದರಲ್ಲಿ ಉತ್ಪ್ರೇಕ್ಷೆಯಿರದು ಐದು ಭಾಷೆಗಳಲ್ಲಿ ಧಾರ್ಮಿಕ ಸಾಹಿತ್ಯ ಸರಸವಾದ ದರಗಳಲ್ಲಿ ದೊರೆಯುವಂತೆ ಮಾಡಿದರು



1964 ರಲ್ಲಿ ಅನ್ನಾರಾಯರು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಪದವಿಯಿಂದ ನಿವೃತ್ತರಾದರೂ ಆ ಕೂಡಲೇ ಮೈಸೂರು ರಾಜ್ಯದ ಮುಜರಾಯಿ ಸಲಹಾದಾರರಾಗಿ 1971 ರವರೆಗೆ ಸೇವ ಸಲ್ಲಿಸಿದರು ಮೈಸೂರು ರಾಜ್ಯದ ಹಲವು ಹನ್ನೊಂದು ಆಲಯಗಳಲ್ಲಿ ಅವರ ಸುಧಾರಣೆಗಳು ಇಂದಿಗೂ ಕೆಲಸ ಮಾಡುತ್ತಿದೆ ಬಿಳಿಗಿರಿ ರಂಗನ ಬೆಟ್ಟ, ಮಲೆ ಮಹದೇಶ್ವರಸ್ವಾಮಿ, ನಂಜನಗೂಡು, ಮೇಲುಕೋಟೆ, ಶ್ರವಣಬೆಳುಗೊಳ, ಮೂಕಾಂಬಿಕಾ, ಘಾಟಿ ಸುಬ್ರಹ್ಮಣ್ಯ ಮೊದಲಾದ ಅದೆಷ್ಟೋ ಸ್ಥಳಗಳಲ್ಲಿನ ಆಲಯಗಳ ಪರಿಶೀಲನೆ ನಡೆಸಿ ಆಡಳಿತ ಸುಧಾರಣೆಗೆ, ಯಾತ್ರಿಕ ಸೌಲಭ್ಯಗಳಿಗೆ, ವಿದ್ಯಾಭಿವೃದ್ಧಿಗೆ ಸಲಹೆ ಸೂಚನೆಗಳನ್ನು ನೀಡಿದರು ಮೈಸೂರು ರಾಜ್ಯದ ಎಲ್ಲ ಆಲಯಗಳಿಗೂ ಅನ್ವಯವಾಗುವಂತಹ ಸಾಮಾನ್ಯ ಧರ್ಮದರ್ಶಿ ಕಾಯದೆಯ

ನ್ನುಂಟುಮಾಡಲು ತೀವ್ರ ಒತ್ತಾಯ ಹಾಕಿದರು. ಆಲಯಗಳಲ್ಲಿ ಮಾಡಬಹುದಾದ ಮಾಡಬಾರದ ಪಟ್ಟಿಗಳನ್ನು ಸಿದ್ಧಗೊಳಿಸಿ, ಆಡಳಿತಗಾರರಿಗೆ, ಅರ್ಚಕರಿಗೆ, ಆಚಾರ ಸಂಹಿತೆಗಳನ್ನು ರಚಿಸಿ ನೀಡಿದರು ಮೈಸೂರು ರಾಜ್ಯದ ಆಲಯಗಳೇ ಅಲ್ಲದೆ, ಬದರೀ, ಕೇದಾರ, ಪೂರಿ, ತಿರುವನಂತಪುರಗಳಲ್ಲಿನ ಆಲಯಗಳಲ್ಲಿಯೂ ಇವರ ಸಲಹೆ, ಸೂಚನೆ, ನಿರ್ದೇಶನಗಳು ಕಾರ್ಯಗತವಾಗಿ ಭಾರತದ ಆದ್ಯಂತ ದೇವಾಲಯಗಳಲ್ಲಿ ಯಾತ್ರಿಕರು ಹಿಂದಿಗಿಂತ ಹೆಚ್ಚು ಸೌಲಭ್ಯ ಸ್ವಾತಂತ್ರ್ಯಗಳನ್ನು ಪಡೆದು ಸೇವೆಯಲ್ಲಿ, ಯಾತ್ರೆಯಲ್ಲಿ ಭಾಗವಹಿಸುವಂತೆ ಆಯಿತು ಕಾಶ್ಮೀರದ ವೈಷ್ಣೋದೇವಿ ಆಲಯಕ್ಕೆ ಅಗತ್ಯವಾಗಿ ಆಗದೇಕಿದ್ದ ವಾಹನಗಳು ಚಲಿಸುವ ರಸ್ತೆಯ ನಿರ್ಮಾಣಕ್ಕೆ ಒತ್ತು ನೀಡಿದರು ಹಾಗೆಯೇ ಹರಿದ್ವಾರ, ಕಾಶಿ, ಹೃಷೀಕೇಶಗಳಲ್ಲಿನ ಸತ್ರಗಳ ಪುನರ್ನವೀಕರಣ, ವ್ಯವಸ್ಥಿತ ಸಿಬ್ಬಂದಿ ಸೇವಗಳಿಗೆ ಏರ್ಪಾಡು ಮಾಡಿದರು

1974 ರಲ್ಲಿ ತಿ ತಿ ದೇ ಧರ್ಮಕರ್ತರ ಮಂಡಳಿಯ ಅಧ್ಯಕ್ಷರಾಗಿ ನೇಮಕ ಹೊಂದಿದ ಡಾ|| ಸಿ ಅನ್ನಾರಾಯರು 1979 ರ ವರಗೆ ಮತ್ತೆ ತಿರುಮಲೆಯ ಆಲಯದ ಅಭಿವೃದ್ಧಿಯಲ್ಲಿ, ಸ್ವಾಮಿ ಸೇವಯಲ್ಲಿ, ಯಾತ್ರಿಕ ಸೇವೆಯಲ್ಲಿ ತೊಡಗಿಸಿಕೊಂಡರು ತಿ ತಿ ದೇ ಗಳ ಆದಾಯವನ್ನು ಆದಾಯಕರದಿಂದ ಮುಕ್ತಗೊಳಿಸುವಲ್ಲಿ ಮುಖ್ಯಪಾತ್ರ ವಹಿಸಿದರು ದೇರ ದೇರ ಕಡಗಳಲ್ಲಿ ತಿ ತಿ ದೇ ಕಲ್ಯಾಣಮಂಟಪಗಳನ್ನೂ, ವಿಚಾರಣಾಕೇಂದ್ರಗಳನ್ನೂ ನಿರ್ಮಿಸಲಾಯಿತು ಈ ಹಿಂದೆಯೇ ಸ್ಥಾಪನಯಾಗಿ ಕಲಸ ಮಾಡುತ್ತಿದ್ದ ಆಯುರ್ವೇದ ಆಸ್ಪತ್ರೆಯ ಅಭಿವೃದ್ಧಿ ಆಯಿತು ಗೋವಿಂದ ರಾಜಸ್ವಾಮಿ ಕಾಲೇಜಿನ ಕಟ್ಟಡಕ್ಕ ನಾಂದಿಯಾಯಿತು ರೂಯಾ ಆಸ್ಪತ್ರೆಯ ಚಿಕಿತ್ಸಾ ಕೊಟಡಿಗಳು, ಚಿಕಿತ್ಸೋಪಕರಣಗಳೂ ಪರಿಕರಗಳೂ ಹೆಚ್ಚುತ್ತ, ಸೂಕ್ಷ್ಮ ತಜ್ಞತೆಯ ಹಾದಿಯಲ್ಲಿ ನಡೆಯ ತೊಡಗಿದವು.

1979 ರಲ್ಲಿ ಅನ್ನಾರಾಯರು ತಿ ತಿ ದೇ ಸೇವೆಯಿಂದ ದೂರವಾದರೂ ತಿರುಪತಿಯಲ್ಲಿಯೇ ನೆಲೆಸಿ ಹಲವು ಹನ್ನೊಂದು ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲುಗೊಂಡರು ನಗರದ ಹಿರಿಯ ನಾಗರಿಕರ ವೇದಿಕೆಯಲ್ಲಿ ಪ್ರಮುಖರಾಗಿ, ಗ್ರಾಹಕರ ವೇದಿಕೆಯ ಮುಖ್ಯ ನೇತಾರರಾಗಿ, ರಾಮಕೃಷ್ಣ ಮಿಷನ್, ಭಾರತೀಯ ವಿದ್ಯಾಭವನ, ತ್ಯಾಗರಾಜ ಮಂದಿರ ನಿರ್ಮಾಣಸಮಿತಿ, ಮುಂತಾದವುಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಕೆಲಸ ಮಾಡಿದರು ಹಲವಾರು ವಿಶ್ವವಿದ್ಯಾನಿಲಯಗಳ ಸೆನೆಟ್‌ಗಳಲ್ಲಿಯೂ ಅನ್ನಾರಾಯರ ಅನುಭವದ, ಪ್ರೌಢಿಮೆಯ, ಸೇವಾ ಮನೋಭಾವದ ಪ್ರಭಾವಗಳನ್ನು ಕಾಣಬಹುದು

ಅನ್ನಮಾಚಾರ್ಯ ಕಲಾಮಂದಿರವನ್ನು ಸ್ಥಾಪಿಸಿದ್ದೇ ಅಲ್ಲದೆ, ತಾಳ್ಳಪಾಕ ಸಾಹಿತ್ಯವನ್ನು ಭಕ್ತಪ್ರಪಂಚಕ್ಕೆ ಸಾದರಪಡಿಸಿದ ಶ್ಲಾಘನೀಯ ಸೇವೆಯೂ ಅಲ್ಲದೆ, 1978 ರಲ್ಲಿ ಅವರು ತಿ ತಿ ದೇ ಧರ್ಮಕರ್ತರ ಮಂಡಳಿಯ ಅಧ್ಯಕ್ಷರಾಗಿದ್ದ ಕಾಲದಲ್ಲಿಯೇ, ಇಂದು ಕರ್ನಾಟಕದ ಜನ ಕೃತಜ್ಞತೆಯಿಂದ ನೋಡುವಂತಹ ದಾಸಸಾಹಿತ್ಯ ಪ್ರಾಜೆಕ್ಟ್ ಸ್ಥಾಪನೆಯಾಯಿತು (ಅದರಲ್ಲಿ ಮೂವತ್ತಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿ ಜನಪ್ರಿಯಗೊಳಿಸಲಾಗಿದೆ ಹಲವು ಹತ್ತು ಧ್ವನಿ ಸುರುಳಿಗಳು ಹೊರಬಂದಿವೆ ವರ್ಷ ವರ್ಷ ವ್ಯವಸ್ಥಿತವಾಗಿ ತಿರುಪತಿಯಲ್ಲಿ ಮೆಟ್ಟಿಲೋತ್ಸವ ನಡೆಯುತ್ತಿದೆ ) ಈ ಎಲ್ಲ ಚಟುವಟಿಕೆಗಳ ತಾಯಿ ಬೇರು ಅನ್ನಾರಾಯರ ಕಾಲದ್ದು ಎಂದರೆ ಅತಿಶಯೋಕ್ತಿಯಲ್ಲ

ಅನ್ನಾರಾಯರು ಕಾರ್ಯನಿರ್ವಹಣಾಧಿಕಾರಿಗಳಾಗಿದ್ದಾಗಲೇ ವೇದ ಧರ್ಮ ಸಮ್ಮೇಳನಗಳ ಪದ್ಧತಿಗೆ ಶ್ರೀ ಗಣೇಶವನ್ನು ಹಾಡಲಾಗಿದ್ದಿತು ಹಿಂದೂಧರ್ಮದ ಪ್ರಸಾರಕ್ಕಾಗಿ ಧರ್ಮಪ್ರಚಾರ ಪರಿಷತ್ ಅನ್ನು ಸಂಘಟಿಸಿದ ಕೀರ್ತಿ, ಉಪಾಧ್ಯಾಯರಿಗಾಗಿ ದೇಸಿಗೆಯ ಧಾರ್ಮಿಕ ಶಿಬಿರಗಳ ಏರ್ಪಾಡುಗಳುಂಟು ಮಾಡಿದ ಕೀರ್ತಿಯೂ ರಾಯರಿಗೇ ಸಲ್ಲತಕ್ಕದ್ದು ಜೊತೆಗೇ ಅಂದು ವಿಶ್ವವಿಖ್ಯಾತವಾಗಿ ನೇತ್ರಚಿಕಿತ್ಸೆ ಮಾಡುತ್ತಿದ್ದ ಇಂದೂ ನಮ್ಮ ನಡುವೆ ಇರುವ ನೇತ್ರತಜ್ಞ ಡಾ|| ಮೋದಿಯವರ ಉಚಿತ ನೇತ್ರ ಚಿಕಿತ್ಸಾ ಶಿಬಿರಗಳನ್ನೂ ಅನ್ನಾರಾಯರ ಕಾಲದಲ್ಲಿ ಆರಂಭಿಸಿ ಮುಂದುವರಿಸಲಾಯಿತು (ಇಂದು ಈ ಶಿಬಿರಗಳು ಹೈದರಾಬಾದಿನ ಸರೋಜಿನಿ ಕಣ್ಣಿನ ಆಸ್ಪತ್ರೆಯವರು ನಡೆಸಿ ಕೊಡುತ್ತಿದ್ದಾರೆ 41 ನೇ ನೇತ್ರಚಿಕಿತ್ಸಾ ಶಿಬಿರದ ವರದಿಯನ್ನು ವಾರ್ತಾಲಹರಿಯಲ್ಲಿ ನೀಡಲಾಗಿದೆ )

ಹೀಗಾಗಿ ಒಬ್ಬ ವ್ಯಕ್ತಿ ಒಂದು ಜೀವಮಾನ ಕಾಲದಲ್ಲಿ ನಡೆಸಬಹುದಾದ ಸೇವಾಕಾರ್ಯದ ಗರಿಷ್ಠ ಮಿತಿಯನ್ನು ಡಾ|| ಅನ್ನಾರಾಯರು ತಲುಪಿದ್ದರೆಂದೇ ಹೇಳಬೇಕು 1908 ರಿಂದ 1999 ರ ವರೆಗೆ ಅತ್ತ ಎಂಟು ವರ್ಷ ಇತ್ತ ಅರ್ಧ ವರ್ಷ ಬಿಟ್ಟರೆ ಒಂದು ಶತಮಾನದ ಕಾಲ ಅದರ ಮೂರನೇ ಎರಡು ಭಾಗ ಸಮಾಜ ಸೇವೆಗೆ ಅಂಕಿತವಾಗಿ ಸ್ವಾಮಿಗೂ ಸಮಾಜಕ್ಕೂ ಸೇವೆ ಸಲ್ಲಿಸಿದ ಡಾ|| ಅನ್ನಾರಾಯರನ್ನು ಭಾರತ ಶಿರೋಮಣಿ ಎಂದು ಬಿರುದು ನೀಡಿದ ಉಪರಾಷ್ಟ್ರಪತಿ ಬಿ ಡಿ ಜತ್ತಿಯವರ ಮಾತುಗಳು ಸಾರ್ಥಕವಾದ ಪ್ರಶಸ್ತಿ ಎನ್ನಬೇಕು ಹಾಗಾಗಿ ಅವರನ್ನು ತಿ ತಿ ದೇವಸ್ಥಾನಗಳಿಗೆ ಸಂಬಂಧಿಸಿದಂತೆ ಶತಮಾನದ ವ್ಯಕ್ತಿ ವಿಶೇಷ ಎಂಬುದರಲ್ಲಿ ಅತಿಶಯವೇನಿಲ್ಲ



ಸಂದರ್ಶಿಸಿ. ಆನಂದಿಸಿ.

ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ.

## ಶ್ರೀ ಅನ್ನಪೂರ್ಣಾದೇವಿ ಸಮೇತ

# ಶ್ರೀ ಕಾಶಿ ವಿಶ್ವೇಶ್ವರಸ್ವಾಮಿ ದೇವಾಲಯ

## ಬುಗ್ಗ ಅಗ್ರಹಾರ, ನಗರಿ.

ತಿರುಪತಿ - ತಿರುತ್ತಣಿ ಮಾರ್ಗದಲ್ಲಿ ತಿರುಪತಿಯಿಂದ ನಲವತ್ತು ಕಿಲೋಮೀಟರ್ ದೂರದಲ್ಲಿ ನಗರಿ ಗ್ರಾಮ ವಿದೆ ಈ ನಗರಿಯಿಂದ ಐದು ಕಿ ಮೀ ದೂರದಲ್ಲಿ ಪವಿತ್ರವಾದ ಕುಶಸ್ಥಲೀನದಿಯ ದಡದಲ್ಲಿರುವ ಬುಗ್ಗ ಅಗ್ರಹಾರದಲ್ಲಿ ದೆಳಗುತ್ತಿದೆ - ದಿವ್ಯವಾದ ಶ್ರೀ ಅನ್ನಪೂರ್ಣಾದೇವಿ ಸಮೇತ ಶ್ರೀ ಕಾಶಿ ವಿಶ್ವೇಶ್ವರಸ್ವಾಮಿ ದೇವಾಲಯ

ಅಹಲ್ಯಾ ಶಾಪ ಸಂಘಟನೆಯ ನಂತರ ಗೌತಮ ಮಹರ್ಷಿ ತೀರ್ಥಯಾತ್ರಾರ್ಥಿಯಾಗಿ ಹಲವು ಹನ್ನೊಂದು ಸ್ಥಳಗಳನ್ನು ಸಂದರ್ಶಿಸಿ ಇಲ್ಲಿಗೆ ಬಂದು ಸ್ವಲ್ಪಕಾಲ ತಪಗೈದು ಪ್ರತ್ಯಕ್ಷನಾದ ಶಿವನನ್ನು ಕುರಿತು ಕಾಶಿಯಲ್ಲಿಯಂತೆಯೇ ಇಲ್ಲಿಯೂ ಸಪರಿವಾರವಾಗಿ ನೆಲೆಸಿ ಎಲ್ಲ ಕಾಲಗಳಲ್ಲಿನ ಭಕ್ತರನ್ನು ಅನುಗ್ರಹಿಸದೇಕೆಂದು ವರವನ್ನು ಬೇಡಿದನು ಆ ಮಹರ್ಷಿಯ ಬೇಡಿಕೆಯಂತೆ ಸ್ವಾಮಿಯು ಕಾಶೀವಿಶ್ವೇಶ್ವರನಾಗಿ, ಅನ್ನಪೂರ್ಣೆ - ವಿಶಾಲಾಕ್ಷಿ - ಕಾಲಭೈರವ, ವಿಘ್ನೇಶ್ವರ, ಸುಬ್ರಹ್ಮಣ್ಯಸ್ವಾಮಿಯರೊಡನೆ ಶ್ರೀದೇವಿ ಭೂದೇವಿಯರೊಡಗೂಡಿದ ಶ್ರೀ ಪ್ರಯಾಗ ಮಾಧವಸ್ವಾಮಿ, ಮತ್ತಿತರ ಪರಿ ವಾರ ದೇವತೆಗಳೊಡನೆ ಕಾಶಿಯಲ್ಲಿ ದರ್ಶನ ನೀಡುವಂತೆಯೇ ಭಕ್ತರಿಗೆ ದರ್ಶನ ನೀಡಿ ನೆಲೆಸಿದನು ಹಾಗಾಗಿ ಈ ಸ್ಥಳವನ್ನು ದಕ್ಷಿಣಕಾಶಿ ಎಂದೂ ಗುರುತಿಸಿದರು ಈ ಕ್ಷೇತ್ರಯಾತ್ರೆ ಮಾಡಿದವರಿಗೆ ಕಾಶಿಯಾತ್ರೆಯ ಫಲ ಪೂರ್ಣವಾಗಿ ದೊರೆಯುತ್ತದೆ ಎಂಬುದು ಪುರಾಣಗಳ ಸ್ಪಷ್ಟೋಕ್ತಿ

ಮುಖ್ಯವಾಗಿ ಕ್ಷೇತ್ರಪಾಲಕನಾದ ಕಾಲಭೈರವ ಸ್ವಾಮಿಯನ್ನು ಭಕ್ತಿ ಪ್ರಪತ್ತಿಗಳಿಂದ ಪೂಜಿಸಲಾಗುತ್ತದೆ

ಪ್ರತಿದಿನ ಪ್ರಾತಃಕಾಲ ಸಾಯಂಕಾಲಗಳಲ್ಲಿ ಅಭಿಷೇಕ ಅರ್ಚನೆಗಳೊಂದಿಗೆ ಮಾಸಶಿವರಾತ್ರಿ, ಮಹಾಶಿವರಾತ್ರಿ, ಶನಿತ್ರಯೋದಶಿ, ಕೃತ್ತಿಕೆ, ಶ್ರವಣ, ಪೌರ್ಣಮಿ, ಅಷ್ಟಮಿ, ಅಮಾವಾಸ್ಯೆ - ಮೊದಲಾದ ಪರ್ವದಿನಗಳಲ್ಲಿ ವಿಶೇಷವಾಗಿ ಪೂಜೆಗಳು ನಡೆಯುತ್ತವೆ

ನಗರಿಯಿಂದ ಹದಿನೈದು ನಿಮಿಷದಲ್ಲಿ ವಾಹನ ಪ್ರಯಾಣದ ಮೂಲಕ ಸೇರಬಹುದಾದ ಈ ಕ್ಷೇತ್ರದ ಒಂದರ ಹಿಂದೆ ಒಂದರಂತೆ ಬಸ್‌ಗಳಿವೆ ತಿರುಪತಿಯಿಂದ ಪ್ರತಿ 15 ನಿಮಿಷಕ್ಕೆ ಒಂದು ಬಸ್ ನಗರಿಗೆ ಹೊರಡುತ್ತದೆ

ನೀವೂ ಬನ್ನಿ. ನಿಮ್ಮವರನ್ನೂ ಕರೆತನ್ನಿ.



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ಆಲಯದ ಶಾಸನಗಳು

ಆಂಗ್ಲ ಮೂಲ - ಡಾ|| ಎನ್. ರಮೇಶನ್.

ಕನ್ನಡಾನುವಾದ - ಬಿ. ಎನ್. ಶ್ರೀನಿವಾಸನ್.

(ಮುಂದುವರೆದಿದೆ)

ಶಕ 1553 ರ ಪ್ರಜೋತ್ಪತ್ತಿ ವರ್ಷದ ಕನ್ಯಾ ಮಾಸದಲ್ಲಿ (29-9-1631) ಶ್ರೀ ವೆಂಕಟೇಶ್ವರಸ್ವಾಮಿಗೂ ಶ್ರೀ ಗೋವಿಂದರಾಜಸ್ವಾಮಿಗೂ ನಿವೇದನೆ ಮಾಡಲೆಂದು ಒಬ್ಬಾನೊಬ್ಬ ರಾಮ ಚಂದ್ರಯ್ಯನು ದಾನ ಮಾಡಿದನೆಂದು ಜಿ ಟಿ 328 ದಾಖಲೆ ಮಾಡಿದೆ ಜೊತೆಗೇ ಸನ್ನಿಧಿ ಬೀದಿಯಲ್ಲಿ ಒಂದು ಮಂಟಪ ನಿರ್ಮಾಣಕ್ಕೂ ದಾನ ಮಾಡಲ್ಪಟ್ಟಿದೆ ಆ ಕಾಲಕ್ಕೆ ಜೀರ್ಣಶೀರ್ಣವಾಗಿದ್ದ ವರದರಾಜ ಪುರದ ನೀರಾವರೀ ವ್ಯವಸ್ಥೆಯನ್ನು ಪುನಃ ಕಾಲುವೆ ತೋಡಿಸುವುದರಿಂದ ಅಭಿವೃದ್ಧಿ ಗೊಳಿಸಿದ ಜಿ ಟಿ 63 ನೇ ಶಾಸನವು ಪ್ರತಿವಾದಿ ಭಯಂಕರ ವೆಂಕಣ್ಣಾಚಾರ್ಯರ ಮಗ (ಶ್ರೀವತ್ಸ ಗೋತ್ರ ಆಪಸ್ತಂಭ ಸೂತ್ರ ಯಜುಃ ಶಾಖೆ) ಅಳಗರಯ್ಯಂಗಾರ್ ಅಣ್ಣಂಗರಾಚಾರ್ಯರು ತಿರುವಿಡೈಯಾಟ್ಟದ ಗ್ರಾಮ ಅವಿಲಾಲಿಯಲ್ಲಿನ ನೀರಿನ ಕಾಲುವೆಗಳನ್ನು ದುರಸ್ತಿ ಗೊಳಿಸಿದ್ದನ್ನೂ, ಹಲವು ಗ್ರಾಮಗಳ ದಾನವನ್ನೂ ಸೂಚಿಸುತ್ತದೆ ಈ ಶಾಸನದಲ್ಲಿಯೇ ಅಳತೆಯ ಮಾನವಾದ 32 ಅಡಿಗಳ ಅಳತೆ ಕೋಲಿನ ಉಲ್ಲೇಖವಿದೆ

ರಾಜ ಇಮ್ಮಡಿ ವೆಂಕಟನ ಚಿಕ್ಕ ತಮ್ಮನಾದ ಮುಮ್ಮಡಿ ಪಿನ್ನ ವೆಂಕಟನ ಮಗನೇ ಶ್ರೀರಂಗದೇವ ಮಹಾರಾಯ ಎಂದು ಕರೆಯಲ್ಪಡುವ ಆರನೇ ರಂಗ ಈತನು ನಾಲ್ಕಡಿರಾಮ ಹಾಗೂ ಇಮ್ಮಡಿ ವಂಕಟರ ಕಾಲದಲ್ಲಿ ಯುವರಾಜನಾಗಿದ್ದು ಕರ್ನಾಟಕದ ಸಿಂಹಾಸನವನ್ನು ಕ್ರಿಶ 1642 ರ ಅಕ್ಟೋಬರ್ 29 ರಂದು ಏರಿದನು ಈತನ ಆಳ್ವಿಕೆ 23 ವರ್ಷ ನಿಡಿದಾಗಿದ್ದು, ಶಕ ವರ್ಷ 1587 ರ ವರೆಗೆ (ಕ್ರಿಶ 1665) ಮುಂದುವರೆಯಿತು ಇವನ ಕಾಲದಲ್ಲಿ ಗೋಲ್ಕೊಂಡ ಬಿಜಾಪುರದ ಸುಲ್ತಾನರು ಕರ್ನಾಟಕವನ್ನು ಆಕ್ರಮಿಸಿದರು ಸೈನ್ಯಾಧಿಪತಿ ಮೀರ್ ಜುಮ್ಲಾ ಇವರ ನವಾಬನಾದನು ರಾಜಾ ರಂಗನು ಸಾಮ್ರಾಜ್ಯವನ್ನು ಬಿಟ್ಟು ಓಡಿ ಹೋಗಿ ಕಳದಿಯ ತನ್ನ ಸಾಮಂತರಾಜರಲ್ಲಿ ಆಶ್ರಯ ಪಡೆದನು

ಶ್ರೀರಂಗರಾಯನು ಎರಡು ಶಾಸನಗಳಲ್ಲಿ ಹೆಸರಿಸಲ್ಪಟ್ಟಿದ್ದರೂ ಒಂದರಲ್ಲಿ ಮಾತ್ರವೇ



ಕಾಲಸೂಚನೆಯಿದೆ ಅದೆಂದರೆ - ಶಕ 1560 ರ ಬಹುದಾನ್ಯ ವತ್ಸರದ ಮಿಧುನ ಮಾಸ (15-16-1638)ದಲ್ಲಿ ಆಪಸ್ತಂಭ ಸೂತ್ರದ ಕಾಶ್ಯಪ ಗೋತ್ರದ ಮೂಲಾ ನಕ್ಷತ್ರದಲ್ಲಿ ಜನಿಸಿದ ಬ್ರಾಹ್ಮಣನೊಬ್ಬನು ತೊಂಬತ್ತೈದು ರೇಖ್ಯೆದಲೆಬಾಳುವ ಸೇವೆಗಳಿಗಾಗಿ, ಎರಡು ನೀರಿನ ಕಾಲುವೆಗಳನ್ನು ಆಲಯಕ್ಕೆ ಒಪ್ಪಿಸಿದನು ಒಂದರಿಂದ ಕಡಮ್ಮೆಕಲ್ ಅಳತೆಯಲ್ಲಿ 160 ಪಟ್ಟಿ ಭತ್ತ ಬರುತ್ತಿದ್ದಿತು ಇನ್ನೊಂದು ಕಾಲುವೆಯು ತಿರುವಿಡ್ಮೆಯಾಟ್ಟಂ ಉಳ್ ಮಂಡಳದ ಗ್ರಾಮಗಳಲ್ಲಿ ಒಂದಾದ ಮಣಿಯಕ್ಕೋನ್‌ಪಟ್ಟುವಿನಲ್ಲಿದ್ದಿತು ಎರಡನೆಯ ಶಾಸನವು (ತಿ ತಿ 436) ರಘುನಾಥನ ಪಾದದಲ್ಲಿ ಶ್ರೀರಂಗರಾಜನ ಸೇವಕನಾದ ತಿರುಪತಿಯ ರಾಮುಡುವಿನ ಅವಿಚ್ಛಿನ್ನ ಭಕ್ತಿಯನ್ನು ಮಾತ್ರವೇ ದಾಖಲಿಸಿದೆ

ನಂತರದ ಕಾಲದ ಎರಡು ಶಾಸನಗಳಲ್ಲಿ ಒಂದು ರುಧಿರೋದ್ಗಾರಿ ವತ್ಸರದ್ದು (ಕ್ರಿ.ಶ 1683) ಮತ್ತೊಂದು ಶಕ 1606 ರ ರಕ್ತಾಕ್ಷಿ (ಕ್ರಿ ಶ 1684) ಯದು ಇವೆರಡೂ ಆಡಳಿತ ನಡಸುತ್ತಿದ್ದ ರಾಜನ ಹೆಸರನ್ನು ಹೇಳದಿದ್ದರೂ ಆರನೇ ರಂಗನ ಪುತ್ರ ನಾಲ್ಕನೇ ವೆಂಕಟನ ಆಳ್ವಿಕೆಯನ್ನು ಉಲ್ಲೇಖಿಸುತ್ತವೆ ವಿಶೇಷವೆಂದರೆ ಇವೆರಡೂ ಶಾಸನಗಳೂ, ಮೂರನಯ ಮತ್ತೊಂದು ಶಾಸನ - ಜಿ ಟಿ 290 - ಒಟ್ಟು ಮೂರೂ ಶಾಸನಗಳೂ ತೆಲುಗಿನಲ್ಲಿವೆ ಇದರಿಂದಾಗಿ ಈ ವೇಳೆಗಾಗಲೇ ತೆಲುಗು ಭಾಷಯು ಆಡಳಿತದ ಭಾಷೆಯಾಗಿ ಸ್ಥಾಪಿತವಾಗಿರದೇಕು ಜಿ ಟಿ 291 ನೇ ಶಾಸನವು ರುಧಿರೋದ್ಗಾರಿ ವರ್ಷದ ವೈಶಾಖ ಮಾಸದ್ದಾಗಿದ್ದು (ಶಕ 1605 - 16-5-1683 ) ತುವರಾಣಿ ಕೊಡ ಪಂಡಿತನ ಮಗ ತಿಮ್ಮ ಹಾಗೂ ಅವನ ತಮ್ಮನ ಸೇವೆಯನ್ನು ದಾಖಲಿಸಿದೆಯಾದರೆ ಜಿ ಟಿ 290 - ಶಾಸನವು ರಾಜಶ್ರೀ ಸಿದ್ದಲೂರಿ ರಾಮಾಜಿ ಮಾದರಸು ಪಂತುಲುಗಾರು ಮಾಡಿದ ಸೇವೆಯನ್ನು ಉಲ್ಲೇಖಿಸುತ್ತದೆ ತಿ ತಿ 263 ನೇ ಶಾಸನವು ಶಕವರ್ಷ 1606 ರ ರಕ್ತಾಕ್ಷಿ ವತ್ಸರದ ಚೈತ್ರ ಮಾಸದ್ದಾಗಿದ್ದು (20-3-1684) ತಿರುವೆಂಗಳನಾಥಸ್ವಾಮಿ ಹಾಗೂ ವರಾಹಸ್ವಾಮಿಗಳಿಗೆ ನಿವೇದನೆಗೆಂದು 575 ಮೌಲ್ಯದ ಒಂದು ಪರಿಶುದ್ಧ ಚಿನ್ನದ ಹಾರದ ಅರ್ಪಣೆಯನ್ನು ಕುರಿತು ಹೇಳುತ್ತದೆ

ಹೀಗಾಗಿ ಕ್ರಿಶ 1359 ರಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ವಿಮಾನ ಗೋಪುರದ ಚಿನ್ನದ ಗಿಲೀಟು ಮಾಡಿಸಿದ ಸಾಳುವ ಮಂಗಿದೇವ ಮಹಾರಾಯನಿಂದ ಆರಂಭವಾದ ವಿಜಯನಗರ ಸಾಮ್ರಾಜ್ಯದ ತಿರುಮಲೆಯ ಸಂಬಂಧವು ಶ್ರೀರಂಗರಾಯ ಮಹಾರಾಯನಾದ 1665 ರಲ್ಲಿ ಆಲಯದಲ್ಲಿ ನೆನಪಿನ ಶಿಲೆಯ ಹಾಸುವಿಕೆಯಿಂದ ಕೊನೆಗೊಂಡಿತು ಮೂರು ಶತಮಾನಗಳಿಗೂ ಹೆಚ್ಚಿಗೆ ಜೀವಂತವಾಗಿದ್ದ ಈ ಸಂಬಂಧದ ನಂತರ ರಾಜಕೀಯವಾಗಿ ಉಂಟಾದ ಉಲ್ಲೋಲ ಕಲ್ಲೋಲಗಳಲ್ಲಿ, ಮುಸಲ್ಮಾನರ ಪಾರುಪತ್ಯದ ಪಾರಮ್ಯದಲ್ಲಿ ತಿರುಮಲೆಯ ಆಲಯದ ಸ್ಥಿತಿಗತಿಗಳು ಗಮನಾರ್ಹವಾದ ಪರಿವರ್ತನೆಯನ್ನು ಕಂಡಿತು

## ವಿಜಯನಗರದ ಕಾಲದ ಆಲಯ

ಗ್ರಾಮೀಣ ಅರ್ಥವ್ಯವಸ್ಥೆ ಪ್ರಮುಖವಾಗಿ ಕೃಷಿಯನ್ನು ಅವಲಂಬಿಸಿರುವುದರಿಂದಾಗಿ ದಕ್ಷಿಣ ಭಾರತದಲ್ಲಿ ದೇವಾಲಯಗಳು ಸಮಾಜದ ಅರ್ಥ ವ್ಯವಸ್ಥೆಯಲ್ಲಿ ಎಲ್ಲ ಕಾಲದಲ್ಲಿಯೂ ಪ್ರಧಾನಪಾತ್ರ ನಿರ್ವಹಿಸುತ್ತ ಬಂದಿವೆ ಆಂಗ್ಲರ ಆಗಮನಕ್ಕೆ ಮುನ್ನ ಇದ್ದ ಅರ್ಥವ್ಯವಸ್ಥೆಯ ಬಗ್ಗೆ ವಿವರವಾದ ಅಧ್ಯಯನ ವ್ಯಾಪಕವಾಗಿ ನಡೆಯಲಿಲ್ಲ ತಿರುಮಲೆಯ ಆಲಯದ ಶಾಸನಗಳು ಈ ಭೂಭಾಗದ ಆರ್ಥಿಕ ಪರಿಸ್ಥಿತಿಗಳ ಬಗ್ಗೆ ಅದರಲ್ಲಿಯೂ ವಿಜಯನಗರದ ಕಾಲದಲ್ಲಿದ್ದ ಆರ್ಥಿಕ ಪರಿಸ್ಥಿತಿಗಳ ಬಗ್ಗೆ ಮಹತ್ವದ ಮಾಹಿತಿಯನ್ನು ನೀಡುತ್ತವೆ

ಒಂದು ಸಂಸ್ಥೆಯ ಇತಿಹಾಸದ ಬಗ್ಗೆ ಇರಬಹುದಾದ ಆಧಾರಗಳಲ್ಲಿ ತಿರುಮಲೆಯ ಶಾಸನಗಳು ಬಹುಮುಖ್ಯ ಸಂಗ್ರಹವಾಗಿವೆ ಈ ಶಾಸನಗಳು ಮುಖ್ಯವಾಗಿ ಇಲ್ಲಿನ ಆಲಯಗಳಿಗೆ ರಾಜರು, ಶ್ರೀಮಂತರು, ಸಾಮಂತರು, ಸಾಮಾನ್ಯರು ನೀಡಿದ ದಾನ ದತ್ತಿಗಳ ವಿವರಣೆಗಳನ್ನು ಒದಗಿಸುತ್ತವೆ ಜೊತಗೇ ಭಕ್ತರು ಆಲಯದ ಬಳಕೆಗೆಂದು ನೀಡಿದ ದಾನಗಳ ವೆಚ್ಚದ ಬಗ್ಗೆಯೂ ಸಾಕಷ್ಟು ಮಾಹಿತಿಯನ್ನೂದಗಿಸುತ್ತವೆ ಅಂದಿಗೆ ಪ್ರಚಲಿತವಿದ್ದ ಆಲಯದ ಆಗಮಿಕ ಪದ್ಧತಿಗಳ ಬಗ್ಗೆಯೂ ಈ ಶಾಸನಗಳು ಸುದ್ದಿಯನ್ನು ಒದಗಿಸುತ್ತವೆ

ಆಲಯದ ಶಾಸನಗಳು ಪ್ರಥಮತಃ ಒಂಬತ್ತನೆಯ ಶತಮಾನದಿಂದ ಹದಿನಾರನಯ ಶತಮಾನದ ಕಾಲವನ್ನು ಪ್ರತಿನಿಧಿಸಿ ಮಧ್ಯಕಾಲೀನ ಭಾರತದ ಆಲಯ ಶಾಸನಗಳ ಪರಂಪರೆಯಲ್ಲಿ ಅತ್ಯುತ್ತಮವಾದ ಆಧಾರ ಸಾಮಗ್ರಿಯನ್ನು ಒದಗಿಸುತ್ತವೆ ತಿರುಮಲೆಯ ಆಲಯ ಶಾಸನಗಳು ಮೂಲತಃ ಆಲಯಕ್ಕೆ ದಾನ ನೀಡಿದ ಭೂಮಿ ಹಾಗೂ ಧನಗಳ ಬಗ್ಗೆ ಆದವುಗಳಾಗಿದ್ದು, ಆಲಯಕ್ಕೆ ಧಾರ್ಮಿಕ ಕಾರಣಗಳಿಗಾಗಿ ನೀಡಿದ ಭೂಮಿಯ ಹಾಗೂ ಧನದ ಬಳಕೆಯ ವಿಧಾನಗಳನ್ನು ತಿಳಿಸುತ್ತವೆ ತಿರುಮಲೆಯ ಶಾಸನಗಳು ಅಂದಿನ ಆಲಯದ ಆರ್ಥಿಕ ವಿಶ್ಲೇಷಣೆಯ ಬಗ್ಗೆ ಮೂಲಾಧಾರಗಳನ್ನು ಒದಗಿಸುವುದೇ ಅಲ್ಲದೆ, ಮಧ್ಯಕಾಲೀನ ಭಾರತದ ಆಲಯ ಕೇಂದ್ರದಲ್ಲಿ ಕಾಲದಿಂದ ಕಾಲಕ್ಕೆ ಉಂಟಾದ ಹೊಸಹೊಸ ಪರಿಷ್ಕರಣಗಳಿಂದಾಗಿ ಆಲಯ ಪದ್ಧತಿಗಳಲ್ಲಿ ಉಂಟಾದ ಪರಿವರ್ತನಶೀಲತೆಯನ್ನು ಸೂಚಿಸುತ್ತವೆ

ನಮ್ಮ ಆಧ್ಯಯನಕ್ಕೆ ಮೂಲ ಸಾಮಗ್ರಿಯನ್ನು ಒದಗಿಸುವುದೆಂದರೆ ಆಲಯದ ಶಾಸನಗಳು. ಸಾಮಾನ್ಯವಾಗಿ ಇಂತಹ ಸಾಮಗ್ರಿ ಪುರಾತತ್ವದ್ದಾಗಿದ್ದು ಸಾಧಾರಣವಾಗಿ ಆಧಾರ ಭೂತವಾಗಿರುತ್ತದೆ

ಈ ಒಂದು ಸಂದರ್ಭದಲ್ಲಿ ಮರಾಠರ ಮೊಗಲರ ಕಾಲದ ಪುರಾತತ್ವ ಆಧಾರಗಳ ರೀತಿಯಲ್ಲಿ ವಿಜಯನಗರ ಸಾಮ್ರಾಜ್ಯ ಕಾಲದ ಇತಿಹಾಸಕ್ಕೆ ಪುರಾತತ್ವ ದಾಖಲೆಗಳು - ಆಲಯ ಶಾಸನಗಳ ಹೊರತಾದವು - ಹೆಚ್ಚಿಗೆ ದೊರೆಯುವವು ಜೊತೆಗೇ ಇನ್ನೂರು ಮುನ್ನೂರು ವರ್ಷಗಳಷ್ಟು ಹಳೆಯದಾದ ದಾಖಲೆಗಳನ್ನು ಅತಿ ಎಚ್ಚರಿಕಯಿಂದ ಗಮನವಿಟ್ಟು ಪರಿಶೀಲಿಸಿದ ನಂತರವೇ ಪ್ರಮಾಣವೆಂದು ಅಂಗೀಕರಿಸದೇಕಾಗುತ್ತದ ಗ್ರಾಮೀಣ ಅಧಿಕಾರಿಗಳ ಸ್ವಹಿತಾಸಕ್ತಿಗಳ ಕಾರಣದಿಂದಾಗಿ ಹಲವಾರು ಸಂದರ್ಭಗಳಲ್ಲಿ ಇಂತಹ ದಾಖಲೆಗಳು ನಕಲಿಯಾಗಿ ಹುಟ್ಟುವುದುಂಟು ಹೀಗಾಗಿ ಗ್ರಾಮೀಣ ಆಧಾರಗಳಿಂದಾಗಿ ಸಿದ್ಧಗೊಳ್ಳುವ ಆರ್ಥಿಕ ಅಧ್ಯಯನದಲ್ಲಿನ ನಿರ್ಣಯಗಳನ್ನು ಪಡೆಯುವಾಗ - ಅತಿಜಾಗರೂಕತಯಿಂದ ನೋಡುತ್ತ, ಇತರತ್ರ ಆಧಾರಗಳ ಸಾಕ್ಷಿ ಸಂಕಲಿಕಯಾಗದ ಹೊರತು - ಅವುಗಳು ಪ್ರಶ್ನಾರ್ಥಕ ಚಿಹ್ನೆಗಳನ್ನು ಹೊಂದಿಯೇ ಇರುವಂತಹವುಗಳಾಗುತ್ತವೆ ಇನ್ನೊಂದು ರೀತಿಯಲ್ಲಿ ಹೇಳುವುದಾದರ ಪುರಾತತ್ವ ದಾಖಲೆ ಹಳೆ

ಯದಾದಷ್ಟೂ ಅದರ ಪ್ರಾಮಾಣಿಕತೆ ಹೆಚ್ಚುತ್ತದೆ ಎಂಬುದೇನೂ ಖಚಿತವಿಲ್ಲ

ಆಲಯ ಶಾಸನಗಳ ವಿಷಯದಲ್ಲಿ ಈ ಒಂದು ಸಾಮಾನ್ಯ ಸೂತ್ರ ಅನ್ವಯವಾಗದು ಲೆಕ್ಕಪತ್ರಗಳ ಕಡತಗಳನ್ನು ಕೃತಕ ದಾಖಲೆಗಳನ್ನಾಗಿ ಮಾಡುವ ಹಣದ ಪ್ರಲೋಭನೆಯಂತಹ ಐಹಿಕ ಆಸೆ ಆಕಾಂಕ್ಷೆಗಳಿಗೆ ಇಲ್ಲಿ ಸ್ಥಳವಿಲ್ಲ ಇವೆಲ್ಲ ದೇವರಿಗೆ ನೀಡಿದ ದಾನ ದತ್ತಿಗಳಾಗಿದ್ದು, ಇಂತಹ ದಾನ ದತ್ತಿಗಳಿಗೆ ಮೂಲಭೂತವಾಗಿ ಒಂದು ಪಾವಿತ್ರ್ಯದ ಭಾವನೆಯಿರುತ್ತದೆ. ಸಮಾಚಾರದಲ್ಲಿನ ಸಂಪೂರ್ಣ ಖಚಿತತೆಯತ್ತ ಹೆಚ್ಚಿನ ಗಮನ ನೀಡಲಾಗಿದ್ದು, ಅಲ್ಲಿನ ಹಣದ ವಿತರಣೆಯ ಬಗ್ಗೆ ಜಾಗರೂಕತೆಯಿಂದ ನಡೆಯುವುದನ್ನು ಕಾಣಬಹುದು ಒಬ್ಬ ಮನುಷ್ಯ ಸರ್ಕಾರವನ್ನಾಗಲೀ ಕಡೆಗೆ ತನ್ನನ್ನೇ ಆಗಲೀ ವಂಚಿಸಿಕೊಳ್ಳಬಹುದಾದರೂ ದೇವರನ್ನು ವಂಚಿಸಲು ಪ್ರಯತ್ನಿಸಲಾರ ವಸೂಲಿಯಾಗದ ಸಾಲವೆಂದು ತಿಳಿದ ಹಲವಾರು ಸಾಲಗಳು ಹುಂಡಿಯ ಪರವಾದ ಮೇಲೆ ಆಲಯಾಧಿಕಾರಿಗಳಿಂದ ಸಾಮಾನ್ಯ ಸೂಚನೆ ಹೊರಟ ಕೂಡಲೇ ದೇವರ ಪರವಾಗಿ ವಸೂಲಾಗಿರುವುದು ಸುಪರಿಚಿತ ಪ್ರಸಂಗಗಳೇ ಆಗಿವೆ ಕಾರಣ ದೇವರ ದುಡ್ಡನ್ನು ಎತ್ತಿಹಾಕಲು ಯಾರೂ ಬಯಸುವುದಿಲ್ಲ ಹಾಗೂ ಸಾಲವೇನಾದರೂ ಇದ್ದರೆ ಲೆಕ್ಕಸರಿನೋಡಿಕೊಂಡು ದೇಬಾಕಿಯಾಗುವುದು ಎಲ್ಲರಿಗೂ ಇಷ್ಟವಾದ ಕೆಲಸವೇ ಹೀಗಾಗಿ ಆಲಯ ಶಾಸನಗಳು ಪೂರ್ಣವಾಗಿ ನಂಬಿಕೆಗೆ ಅರ್ಹವಾದವು ಹಾಗೂ ತಕ್ಕ ನಿರ್ಣಯಗಳನ್ನು ಕೈಗೊಳ್ಳುವಲ್ಲಿ ಸಹಾಯ ಮಾಡುತ್ತವೆ ಎಂಬುದರಿಂದ ಅವುಗಳಿಗೆ ಪ್ರಾಧಾನ್ಯ ಬರುವುದು

ಹದಿನಾರನೆಯ ಶತಕದ ಭೂಕಂದಾಯ, ಆಲಯ ಭೂಮಿಗಳು ಆಲಯ ಶಾಸನಗಳೆಂದರೆ ಮುಖ್ಯವಾಗಿ ಗ್ರಾಮಗಳ ಅಥವಾ ಗ್ರಾಮಭಾಗಗಳ ಅಥವಾ ಒಂದಷ್ಟು ಭೂಮಿಯ ಸಾಗುವಳಿ ಆಗುತ್ತಿರುವ ಅಥವಾ ಆಗದಿರುವ ಭೂಮಿಗಳ ದಾನದ ದಾಖಲೆಗಳು ಹಲವಾರು ಸಂದರ್ಭಗಳಲ್ಲಿ ಈ ಭೂಮಿಯ ಬಂಡವಾಳದಿಂದ ಆದ ಉತ್ಪನ್ನವನ್ನು ಆಲಯದ ಯಾವುದೋ ಒಂದು ಅಥವಾ ಹಲವು ಸೇವೆಗಳಲ್ಲಿ ದಾನಿಯ ಹೆಸರಿನಲ್ಲಿ ಬಳಸಬೇಕೆಂದು ಕಟ್ಟು ಮಾಡಲಾಗುತ್ತದೆ ಹಲವು ಸಂದರ್ಭಗಳಲ್ಲಿನ ದಾನಗಳು ಒಂದು ಬಾರಿಯ ಪ್ರತ್ಯೇಕವಾದ ಉತ್ಸವ ಉಭಯಕ್ಕೆ ಮಾತ್ರ ಸೀಮಿತವಾಗುತ್ತವೆ ಮೊದಲ ವರ್ಗದ ದಾನಗಳ ದಾಖಲೆಗಳಲ್ಲಿ ಎಂದರೆ ಯಾವುದೋ ಉತ್ಪನ್ನ ಬರುವ ಬಾಬತ್ತಿನಲ್ಲಿ ಬಂಡವಾಳವಾಗಿ ಹೂಡಿ ಬರುವ ಆದಾಯದಿಂದ ನಿರ್ದೇಶಿತ ಸೇವೆ ಉತ್ಸವಗಳನ್ನು ನಡೆಸಬೇಕೆಂದು ನೀಡಿದ ದಾನ ಶಾಸನಗಳಲ್ಲಿ, ಸ್ಥಳೀಯ ಸಾಮಾಜಿಕ ಆರ್ಥಿಕ ವಿವರಗಳ ಬಗ್ಗೆ ಆಸಕ್ತಿದಾಯಕವಾದ ಮಾಹಿತಿಗಳನ್ನು ಕಾಣಬಹುದು

ಈ ಬಗ್ಗೆ ಅಧ್ಯಯನ ಮುಂದುವರೆಸುವಾಗ ಆ ಕಾಲದಲ್ಲಿ ಪ್ರಚಲಿತವಿದ್ದ ಭೂಮಿ ಕಾಣಿಗಳ ಬಗೆಗಿನ ಸಾಮಾನ್ಯ ಲಕ್ಷಣಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ವಿಜಯನಗರದ ಆಡಳಿತಕಾಲದಲ್ಲಿ ಭೂಕಂದಾಯದ ಬಗ್ಗೆ ವಿವಿಧ ಪ್ರಾಥಮಿಕ ವಿಭಾಗಗಳಿದ್ದವು ಎಂಬುದು ಸರ್ವಶ್ರುತ ಅವುಗಳೆಂದರೆ-

ಅ) ಭಂಡಾರವಾಡೆ ಅಥವಾ ರಾಜನ ವ್ಯವಸಾಯದ ಭೂಮಿಗಳು ಇದರಿಂದ ಪ್ರತಿವರ್ಷವೂ ಬರುವ ಆದಾಯವನ್ನು ರಾಜ್ಯಕೋಶಾಗಾರಕ್ಕೆ ಸೇರಿಸಿ ರಾಜ್ಯದ ವೆಚ್ಚಗಳನ್ನು ಸರಿದೂಗಿಸಲಾಗುತ್ತಿದ್ದಿತು

ಆ) ಅಮರಂ ಜಮೀನುಗಳು ನಾಯಕರಿಗೆ ಸೇನಾಧಿಪತಿಗಳಿಗೆ ಸೇರಿದ್ದು, ಅವರುಗಳು ಒಂದು ಗೊತ್ತಾದ ಸಂಖ್ಯೆಯ ಸೈನ್ಯವನ್ನು ಹೊಂದಿರಲು ತಕ್ಕ ವೆಚ್ಚಗಳಿಗಾಗಿ ಈ ಭೂಮಿಯ ಉತ್ಪನ್ನಗಳ ಆದಾಯವನ್ನು ಪಡೆಯುತಕ್ಕದ್ದು ಈ ಸೈನಿಕರ ಸೇವೆಯನ್ನು ರಾಜನು ಸೂಕ್ತ ಕಂಡಾಗ, ಅಗತ್ಯವಿದ್ದಾಗ "ಬಳಸಬಹುದಾಗಿದ್ದಿತು. ಈ ವಿಧಾನದಲ್ಲಿ ಅನೇಕ ಒಳ ಕಟ್ಟುಪಾಡುಗಳಿರುತ್ತಿದ್ದವು. ಕೆಲವು ವೇಳೆ ಇಡೀ ಆದಾಯವನ್ನು ಸೈನ್ಯದ ವೆಚ್ಚಗಳಿಗಾಗಿ ಬಳಸಿದರೆ, ಹಲವು ಬಾರಿ ಆದಾಯದ ಒಂದು ಭಾಗವನ್ನು ನೇರವಾಗಿ ರಾಜ ಕೋಶಕ್ಕೆ ಸಲ್ಲಿಸಿ, ಮಿಕ್ಕದ್ದನ್ನು ಸೈನ್ಯದ ವೆಚ್ಚಗಳಿಗಾಗಿ ಬಳಸಲಾಗುತ್ತಿತ್ತು

ಇ) ದೇವ ಭೂಮಿಗಳು ಎಂಬ ಬ್ರಾಹ್ಮಣ, ಆಲಯ, ಮಠ, ಶಿಕ್ಷಣ ಸಂಸ್ಥೆಗಳ ವರ್ಷಕ್ಕೆ ದಾನಧರ್ಮಗಳಿಗಾಗಿ ನೀಡಿದ ಸಾಗುವಳಿಯ ಭೂಮಿ ಇವುಗಳ ಕಟ್ಟುಪಾಡು ಕಾಲಾವಧಿಗಳು ಪ್ರತಿಯೊಂದು ಸಂದರ್ಭದಲ್ಲಿ ಬೇರೆ ಬೇರೆ ಆಗಿರುತ್ತಿದ್ದವು. ಹಲವು ಬಾರಿ ಮಠಾಧಿಪತಿಗಳೇ ಒಡೆಯರಾಗಿ ಇರುತ್ತಿದ್ದರು ಹಲವು ಬಾರಿ ಆಲಯಗಳವರು ಧರ್ಮದರ್ಶಿಗಳಾಗಿ ನೋಡಿಕೊಳ್ಳುತ್ತಿದ್ದರು

## ಆಲಯದ ಆದಾಯ ಭಾಗ

ಗ್ರಾಮಗಳ ಅಥವಾ ಗ್ರಾಮ ಭಾಗಗಳ ಹಿಡುವಳಿಯ ಷರತ್ತುಗಳು ಹೇಗೇ ಇದ್ದರೂ ಆಲಯದ ಭೂಮಿಯ ಆದಾಯವನ್ನು ಸ್ಥೂಲವಾಗಿ ಎರಡು ರೀತಿಯಾಗಿ ಭಾಗಿಸಿ - ಮೇಲ್‌ವರಂ



## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

**ಶ್ರೀ ವೆಂಕಟೇಶ ಸುಪ್ರಭಾತ**
ವ್ಯಾಖ್ಯಾನಸಹಿತ ಬೆಲೆ 2-50
**ಗುರು ಶ್ರೀಶ ವಿಠಲದಾಸರ ಕೃತಿಗಳು**
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 6-00
**ದಾಸತತ್ತ್ವಪ್ರಕಾಶಿಕೆ**
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 10-00
**ಸ್ತೋತ್ರಕುಸುಮ ಮಾಲಾ**
ಸಂ - ಎಂ ಎಸ್ ವೆಂಕಟಾಚಲಂ 3-00
**ತ್ಯಾಗರಾಜಸ್ವಾಮಿ ಕೃತಿಗಳ ಹಲವು ಮುಖಗಳು**
ಎಸ್ ಎಸ್ ಮೂರ್ತಿ ಬೆಲೆ 5-00
**ಕರ್ನಾಟಕ ಹರಿದಾಸರು**
ತೆಲುಗು, ಹಿಂದಿ, ಆಂಗ್ಲ, ಕನ್ನಡ 2-25
**ಶ್ರೀ ಶ್ರೀನಿವಾಸನ ಹಾಡುಗಳು**
ಪ್ರಸನ್ನ ವೆಂಕಟದಾಸರು
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 7-00
**ಕನಕದಾಸರು ಅವರ ಸಾಹಿತ್ಯಸಮೀಕ್ಷೆ**
ಸಂ - ಕೆ ಅಪ್ಪಣ್ಣಾಚಾರ್ಯ 16-00
**ಶ್ರೀದವಿಠಲದಾಸರ ಕೃತಿಗಳು**
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 9-00
**ಉರಗಾದ್ರಿವಾಸ ವಿಠಲದಾಸರ ಜೀವನ ಮತ್ತು ಕೃತಿಗಳು**
ಸಂ - ಕೆ ಎಂ ಕೃಷ್ಣರಾವ್ ಬೆಲೆ 15-00
**ಶ್ರೀ ಗುರು ವಿಜಯ ವಿಠಲದಾಸರ ಅಷ್ಟಕ**
ಬೆಲೆ 3-00
**ಪುರಂದರೋಪನಿಷತ್**
ಬನ್ನಂಜೆ ಗೋವಿಂದಾಚಾರ್ಯ 6-75
**ನಮ್ಮ ಸಮಸ್ಯೆಗಳಿಗೆ ಭಗವದ್ಗೀತೆಯ ಪರಿಹಾರ** 7-00
- ಡಾ|| ಎಸ್ ಬಿ ರಘುನಾಥಾಚಾರ್ಯ
**ಗೀತಾಸಾರೋದ್ಧಾರ** 14-00
ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು

ಅಂಚೆ ವೆಚ್ಚ ಪ್ರತ್ಯೇಕ ಸಗಟು ಖರೀದಿಗೆ ಆಕರ್ಷಕ ಕಮಿಷನ್ ಉಂಟು ವಿ ಪಿ ಪಿ ಇಲ್ಲ ಡಿ ಡಿ ಗಳನ್ನು ಮಾತ್ರ ಸ್ವೀಕರಿಸಲಾಗುವುದು ಕೂಡಲೇ ಬರಯಿರಿ

**ಪುಸ್ತಕಮಾರಾಟ ವಿಭಾಗ,**
ತಿ ತಿ ದೇ ತಿರುಪತಿ - 517 507

* * *

ಹಾಗೂ ಕುಡಿವರಂ ಎಂದು ವರ್ಗೀಕರಿಸಿ ಮೊದಲನೆಯದನ್ನು ಭೂಮಿಯ ಒಡೆಯರಿಗೂ ಎರಡನೆಯದನ್ನು ಭೂಮಿಯಲ್ಲಿ ಸಾಗುವಳಿ ಮಾಡುವವನಿಗೂ ನೀಡಲಾಗುತ್ತಿದ್ದಿತು ಈ ವ್ಯವಸ್ಥೆ ಹೆಚ್ಚು ಕಡಿಮೆ ಆಂಗ್ಲರು ಅಧಿಕಾರವನ್ನು ಸ್ಥಾಪಿಸುವವರೆಗೆ ನಡೆದು ಬಂದಿತು 'ಮೇಲ್ ವರಂ' ಆದಾಯವು ಗ್ರಾಮವು ದಾನವಾದ ವ್ಯಕ್ತಿಗೆ ಅಥವಾ ಮಠಕ್ಕೆ ಅಥವಾ ಆಲಯಕ್ಕೆ ಅಥವಾ ಧರ್ಮದ ಶೀಗಳಿಗೆ ಸೇರುತ್ತಿದ್ದಿತು ಕುಡಿವರವು ಭೂಮಿಯಲ್ಲಿ ಬೆಳೆ ತೆಗೆಯುವ ರೈತನು ಇಟ್ಟುಕೊಳ್ಳುತ್ತಿದ್ದ ಆದಾಯವಾಗಿದ್ದಿತು ಕೃಷಿ ಭೂಮಿಯ ಬೆಳೆಯ ಆದಾಯವನ್ನು ಈ ರೀತಿಯಾಗಿ ಒಡೆಯ ರೈತರು ಹಂಚಿಕೊಳ್ಳುವ ಪದ್ಧತಿಯು ಪಲ್ಲವ ಹಾಗೂ ಚೋಳರ ಕಾಲದಲ್ಲಿಯೂ ಪ್ರಚಲಿತವಾಗಿದ್ದಿತು (ಆಗ ಇವುಗಳನ್ನು ಕ್ರಮವಾಗಿ ಮಿಯಾಚ್ಚಿ, ಕನಿಯಾಚ್ಚಿ ಎನ್ನುತ್ತಿದ್ದರು ) ಹೀಗಾಗಿ ಒಬ್ಬ ದೊರೆಯು ಆಲಯವೊಂದಕ್ಕೆ ಒಂದು ಗ್ರಾಮದ ದಾನ ನೀಡಿದರೆ ವಾಸ್ತವವಾಗಿ ಆಲಯ ಪಡೆಯುತ್ತಿದ್ದದ್ದು ಮೇಲ್‌ವರಂ ಅನ್ನು ಎಂದರೆ ಆದಾಯದ ಒಂದು ಭಾಗವನ್ನು ಮಾತ್ರ. ಇದು ರಾಜ ಅಥವಾ ರಾಜಭಂಡಾರವು ಸಾಮಾನ್ಯ ಸ್ಥಿತಿಯಲ್ಲಿ ಪಡೆಯುತ್ತಿದ್ದ ಭಾಗವಾಗಿದ್ದಿತು ಕುಡಿವರಂ ಮಾತ್ರ ಎಲ್ಲ ಸ್ಥಿತಿಯಲ್ಲಿಯೂ, ಎಲ್ಲ ಕಾಲದಲ್ಲಿಯೂ ರೈತನ ಪಾಲಿಗೆ ಮಿಗುತ್ತಿದ್ದ ಭಾಗವಾಗಿದ್ದಿತು

ಹೀಗಾಗಿ ಆಲಯ ಶಾಸನಗಳ ಆಧಾರದಿಂದ ನಡೆಸುವ ಸಾಮಾಜಿಕ ಆರ್ಥಿಕ ಅಧ್ಯಯನದಲ್ಲಿ ಮೊದಲನೆಯದಾಗಿ ಗಮನಿಸಬೇಕಾದ ಅಂಶವೆಂದರೆ ಭೂಮಿಯ ಸಾಗುವಳಿ ಮಾಡುವ ರೈತನ ಭಾಗದ ಆದಾಯವನ್ನು ಯಾವ ಕಾಲದಲ್ಲಿಯೂ ಯಾರೂ ಮುಟ್ಟಲಿಲ್ಲ ಭೂಮಿಯ ಒಡೆತನ ವ್ಯಕ್ತಿ, ರಾಜ್ಯ, ಮಠ, ಶಿಕ್ಷಣಸಂಸ್ಥೆ ಆಲಯ - ಯಾರದ್ದೇ ಆಗಿದ್ದರೂ ರೈತನ ಮೂಲಭೂತ ಆದಾಯ ಹಾಗೇ ಇದ್ದಿತು

## ಆಲಯ ಸಂಪನ್ಮೂಲಗಳ ನೀರಾವರೀ ಸಾಮರ್ಥ್ಯ

ದಾನದ ಮೂಲಕ ಬಂದ ಧನ ಸಂಪತ್ತಿಯನ್ನು ಬಂಡವಾಳವಾಗಿ ತೊಡಗಿಸಲು ನೀರಾವರೀ ಅಭಿವೃದ್ಧಿ ಒಂದು ಮುಖ್ಯವಾದ ಮಾಧ್ಯಮವನ್ನು ತಿರುಪತಿಯಲ್ಲಿ ಒದಗಿಸಿತು ಕಾರಣ ಇದೊಂದು ನಂಬಲರ್ಹವಾದ ಸ್ಥಿರ ಮಾಧ್ಯಮವಾಗಿದ್ದಿತು ತಿರುಮಲೆಯ ಆಲಯದ ವ್ಯಾಪ್ತಿ ಧ್ಯಮಯವಾದ ಹಾಗೂ ಅನೇಕವಾದ ಪೂಜಾ ಉತ್ಸವಾದಿಗಳು ಚಿರಂತನವಾದ ಧಾರಾವಾಹಿಯಾಗಿ ಉಂಟಾಗುವ ಆದಾಯದ ಸೆಲೆಯನ್ನು ತನ್ನ ದಾನ ದತ್ತಿಗಳಿಂದ ಅಪೇಕ್ಷಿಸಿದ್ದು ಸಹಜವೇ ನೀರಾವರೀ ಯೋಜನೆಗಳ ಈ ವ್ಯಾಪಕವಾದ ವ್ಯವಸ್ಥೆಯಿಲ್ಲದೇ ಹೋಗಿದ್ದಲ್ಲಿ ದಾನಿಗಳು ನೀಡಿದ ದಾನಗಳ ಆದಾಯ ಉದ್ದೇಶಿತ ಪೂಜೆ ಪುನಸ್ಕಾರಗಳ ಆಚರಣೆಯಲ್ಲಿ ಕೆಲಸಕ್ಕೆ ಬರುವಂತಹ ಸಂಭಾವ್ಯತೆಗಳಿದ್ದವೇ ಎಂಬುದು ಅನುಮಾನ ಹೀಗಾಗಿ ಆಲಯದ ಸಾಂಸ್ಥಿಕ ಅಭಿವೃದ್ಧಿಯು ಆಲಯದ ಕಡೆಯಿಂದ ನಡೆದು ಬಂದ ದೇಸಾಯಾಭಿವೃದ್ಧಿ ಕಾರ್ಯಕ್ರಮಗಳೊಡನೆ ನೇರವಾಗಿ ಸಂಬಂಧ ಹೊಂದಿ ಬೆಳೆಯುವಂತಾಯಿತು

ಆಲಯದ ಆಡಳಿತದ ಸಮರ್ಥ ಹಾಗೂ ಸರ್ವಧರ್ಮ ಸಮಭಾವದ ಬೆಳವಣಿಗೆಯೂ ಕೂಡ ನೀರಾವರೀ ವ್ಯವಸ್ಥೆಯ ಸಾಫಲ್ಯವನ್ನು ಅವಲಂಬಿಸಿದ್ದಿತು ಎರಡು ಶತಮಾನಗಳ ಕಾಲ ಒಂದು ಪ್ರಧಾನ ಆಲಯವಾಗಿ ಬೆಳೆಯುತ್ತ ಬಂದ ತಿರುಪತಿಯ ಆಲಯವು ೧೩೮೦ ರಲ್ಲಿ ಹನ್ನೆರಡು ಮಂದಿ ಸ್ಥಾನತ್ತಾರರ ಆಡಳಿತ ಪರಿಧಿಯಲ್ಲಿ ಬಂದಿತು ಒಂದು ಶತಮಾನದ ಬೆಳವಣಿಗೆಯ ನಂತರ ೧೪೫೦ ರಲ್ಲಿ ಮತ್ತೆ ಆಲಯದ ಆಡಳಿತ ವರ್ಗಗ ಕೆಲಸಗಳ ವ್ಯಾಪ್ತಿ ಪರಿವರ್ತಿತವಾಯಿತು ಆಲಯಕ್ಕೆ ಕೊಡಮಾಡಿದ ಸಂಪನ್ಮೂಲಗಳ ಹಾಗೂ ಆಲಯದ ಸರ್ವಧರ್ಮ ಸಮಭಾವದ ಆಡಳಿತಗಳು ಒಂದರೊಡನೊಂದು ಹಾಸುಹೊಕ್ಕಾಗಿ ಪರಸ್ಪರಾವಲಂಬಿಗಳಾಗಿ ಬೆಳೆದವು. ಹದಿನೈದು ಹದಿನಾರನೇ ಶತಮಾನವಲ್ಲಿ ಆಲಯ ಗಳಿಸಿದ ಸಂಪನ್ಮೂಲಗಳ ಹೆಚ್ಚಳಕ್ಕೆ ಕಾರಣ ಅವುಗಳ ಆಡಳಿತದಲ್ಲಿ ಆಲಯದ ಆಡಳಿತಾಂಗ ತೋರಿಸಿದ ಸಾಮರ್ಥ್ಯ ಹಾಗೂ ಸರ್ವಧರ್ಮ ಸಮಭಾವಗಳು, ವಿಜಯನಗರದರಸರು ತೋರಿದ ನೀಡಿದ ಆಶ್ರಯಗಳಷ್ಟೇ ಮುಖ್ಯ. ಹದಿನಾರನೇ ಶತಮಾನದಲ್ಲಿ ಆಲಯದ ಸಂಪತ್ತು ಹೆಚ್ಚಾಗುತ್ತ ಹೋಯಿತು. ಆಲಯದ ಆಡಳಿತದ ಜಾತ್ಯತೀತ ಸಂಸ್ಥೆ ಹೆಚ್ಚಿದ ಸಂಪತ್ತಿನ ಆಡಳಿತಕ್ಕೆ ಹೆಚ್ಚು ಒತ್ತು ನೀಡುತ್ತ ಹೋಯಿತು

(- ಮುಂದುವರಯುವುದು.)



# ಶ್ರೀಕೃಷ್ಣ ಜಯಂತಿ ಸಂದೇಶ

- ಶ್ರೀ ಶ್ರೀ ವಿದ್ಯಾವಲ್ಲಭತೀರ್ಥ ಶ್ರೀಪಾದರು.

ಐದು ಸಾವಿರ ವರ್ಷಗಳ ಹಿಂದೆ, ಒಂದು ಕೃಷ್ಣಪಕ್ಷ ಇರುಳಲ್ಲಿ, ಭಾರತದ ನೆಲದಲ್ಲಿ ಬೆಳಕಿನ ಪುಂಜ ಮೂಡಿ ಬಂತು ಶ್ರೀಕೃಷ್ಣನೆಂಬ ಬೆಳಕಿನ ಪುಂಜ, ಕತ್ತಲಲ್ಲಿ ಜ್ಞಾನ ಸೂರ್ಯನ ಉದಯ ಜೀವಿಗಳ ಸಂಸಾರದ ಸೆರೆಯನ್ನು ಬಿಡಿಸಲು ಶ್ರೀಕೃಷ್ಣ ಕಂಸನ ಸೆರೆಮನೆಯಲ್ಲಿ ಮೂಡಿ ಬಂದ.

ಜರಾಸಂಧ ಇಡೀ ದೇಶದ ಸಮ್ರಾಟ ಆಗಿ ಮೆರೆಯುವ ಕನಸು ಕಂಡಿದ್ದ ಅದಕ್ಕಾಗಿ ದೇಶದ 22,800 ಮಂದಿ ರಾಜಕುಮಾರರನ್ನು ಮಗಧ ದೇಶದ ಸೆರೆಯಲ್ಲಿಟ್ಟಿದ್ದ 16,100 ಮಂದಿ ರಾಜ ಕುಮಾರಿಯರನ್ನು ಪ್ರಾಗ್‌ಜ್ಯೋತಿಷದ - ಈಗಿನ ಅಸ್ಸಾಮ್ ರಾಜ್ಯದ, ದೊರೆಯಾಗಿದ್ದ ನರಕಾಸುರನು ಸೆರೆಯಲ್ಲಿರಿಸಿದ್ದ ಕೃಷ್ಣ ಬಂದ ಈ ದೇಶ ಜರಾಸಂಧನ ಕುತಂತ್ರಕ್ಕೆ ಬಲಿಯಾಗುವುದು ತಪ್ಪಿತು

ಕಂಸ ತನ್ನ ತಂದೆಯನ್ನು ಸೆರೆಯಲ್ಲಿಟ್ಟು, ತನ್ನ ದುರಾಡಳಿತದಿಂದ ಇಡಿಯ ದೇಶವನ್ನು ಕಬಳಿಸಬೇಕೆಂದು ಕನಸು ಕಂಡಿದ್ದ ಕೃಷ್ಣ ಬಂದ ಎಂದೇ ಕಂಸನ ಕನಸು ನನಸಾಗಲಿಲ್ಲ

ದುರ್ಯೋಧನನಂತೂ ಭಾರತದ ದೊರೆಯಾಗಬೇಕೆಂದು ಕೊನೆಯವರೆಗೂ ಅವಿರತ ಪ್ರಯತ್ನ ಮಾಡಿದ. ಅದಕ್ಕಾಗಿ ಅವನು ಮಾಡದ ಕುತಂತ್ರವಿಲ್ಲ ಕೃಷ್ಣ ಬಂದುದರಿಂದ ದುರ್ಯೋಧನನ ತಂತ್ರ ಫಲಿಸಲಿಲ್ಲ ಕೈಯಲ್ಲಿ ಆಯುಧ ಹಿಡಿಯದ ಕೃಷ್ಣನು ಕೇವಲ ಪಾರ್ಥಸಾರಥಿಯಾಗಿ ಕುದುರೆಗಳ ಚಾಟಿ ಹಿಡಿದ ಶ್ರೀಕೃಷ್ಣ ಆದೇಶದಂತೆ ೧೮ ಅಕ್ಷೋಹಿಣಿ ವೀರರು ಧರೆಗುರುಳಿದರು ಇತಿಹಾಸದಲ್ಲಿ ದಾಖಲೆಯಾದ ಮೊದಲ ಜಾಗತಿಕ ಯುದ್ಧ ಎಂದರೆ ಕೃಷ್ಣನ ಸಾರಥ್ಯದ ಈ ಕೌರವ ಪಾಂಡವ ಯುದ್ಧವೇ, ೧೮ ದಿನಗಳಲ್ಲಿ ಸುಮಾರು ೫೦ ಲಕ್ಷ ಮಂದಿಯ ನರಮೇಧ ಇತಿಹಾಸದ ಮಹಾಯುದ್ಧ ಯುಗಾಂತವನ್ನೇ ನಿರ್ಮಿಸಿ ಹೊಸ ಯುಗಕ್ಕೆ ನಾಂದಿ ಹಾಡಿದ ಯುದ್ಧ. ಶಾಂತಿ ಹಾಗೂ ಧರ್ಮ ಸ್ಥಾಪನೆಗಾಗಿ ಯುದ್ಧ

ಈ ಯುದ್ಧದಿಂದ ಜಗತ್ತಿಗೆ ಆದ ಇನ್ನೊಂದು ಮಹತ್ ಲಾಭವೆಂದರೆ ಭಗವದ್ಗೀತೆಯ ಉಗಮ ಅರ್ಜುನನನ್ನು ನೆಪವಾಗಿಟ್ಟುಕೊಂಡು ಮನು ಕುಲಕ್ಕೆಲ್ಲಾ ಮಾಧವನು ನೀಡಿದ ವಿಶ್ವ ಸಂದೇಶ ಭಗವತ್ ಗೀತೆಯಂಥ ತತ್ವಗ್ರಂಥ ಜಗತ್ತಿನಲ್ಲಿ ಆ ಮೊದಲು ಇರಲಿಲ್ಲ. ಆ ಮೇಲೆ ಬರಲಿಲ್ಲ ಕೃಷ್ಣ ತನ್ನ ಪುಟ್ಟ ಬಾಯಲ್ಲಿ ತಾಯಿಗೆ ಇಡಿಯ ವಿಶ್ವವನ್ನು ತೋರಿದ, ಪುಟ್ಟ ಕೃತಿ ಭಗವದ್ ಗೀತೆಯಲ್ಲಿ ಇಡಿಯ ಅಧ್ಯಾತ್ಮ ರಹಸ್ಯವನ್ನೆಲ್ಲಾ ಮನುಕುಲಕ್ಕೆ ತೆರೆದು ತೋರಿದ ಕೃಷ್ಣ ಜಯಂತಿಯ ಈ ಪರ್ವಕಾಲದಲ್ಲಿ ಶ್ರೀಕೃಷ್ಣನ ಸಂದೇಶವನ್ನು ಮನನ ಮಾಡುವುದು ಎಲ್ಲರ ಪವಿತ್ರ ಕರ್ತವ್ಯ. ಶ್ರೀಕೃಷ್ಣನು ಗೀತೆಯಲ್ಲಿ ಹೇಳುತ್ತಾನೆ

ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ।
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ

ನಾನು ಮಾಡುತ್ತೇನೆ ಎಂಬ ಅಹಂಕಾರವೇ ನಮ್ಮ ಎಲ್ಲ ದುಃಖಕ್ಕೆ ಮೂಲ ನನ್ನ ಬದುಕಿಗೆ ನಾನೇ ಹೊಣೆ ಎಂಬ ಸ್ವಪ್ರತಿಷ್ಠೆಯೇ ಎಲ್ಲ ಸಮಸ್ಯೆಗಳ ಮೂಲ ಯಾರೂ ಏನೂ ಮಾಡುವುದಿಲ್ಲ ಆದರೂ ಎಲ್ಲರೂ ಎಲ್ಲವನ್ನೂ ಮಾಡುತ್ತಾರೆ ಇದರ ಹಿಂದೆ ಇರುವ ವಿಧಿ ಏನು ಮಾಡಿಸಿತೋ ಅದನ್ನು ಮಾತ್ರ ಎಲ್ಲರೂ ಮಾಡುತ್ತಾರೆ ಮಾಡಿಸುವ ಸೂತ್ರಧಾರ ಅವನು ನಾವು ಸೂತ್ರದ ಬೊಂಬೆಗಳು ಹೀಗೆ ಬದುಕಿನ ಎಲ್ಲ ನಡೆಯನ್ನೂ ಭಗವಂತನ ಪೂಜೆ ಎಂದು ಪ್ರಾಮಾಣಿಕವಾಗಿ ಮಾಡಿ ಅವನಿಗೆ ಅರ್ಪಿಸಿ ಬಿಡು "ನಾಹಂ ಕರ್ತಾ ಹರಿಃ ಕರ್ತಾ" ಎಂಬ ಎಚ್ಚರ ಸದಾ ನಿನ್ನಲ್ಲಿ ಜಾಗೃತವಾಗಿರಲಿ ನಾನು ನನ್ನದು ಎಂಬ ಬಿಗುಮಾನ ಬೇಡ ಇಂಥದು ಬೇಕು ಎಂಬ ಹಠ ಬೇಡ ಏಕೆಂದರೆ ಬೇಕುಗಳ ಸರಮಾಲೆಯೇ ಎಲ್ಲ ದುರಂತಗಳ ಮೂಲ ಏನು ಸಿಕ್ಕಿತೋ ಅದು ಭಗವತ್ ಪ್ರಸಾದ ಎಂದು ಸ್ವೀಕರಿಸಿ ಸಂತಸದಿಂದ ಬಾಳು. ಈ ಬದುಕೇ ಪುಣ್ಯ ಪಾಪಗಳ ನಿರಂತರ ಹೋರಾಟ ಈ ಹೋರಾಟದಲ್ಲಿ ದುರ್ಯೋಧನ ಗೆಲ್ಲದಿರಲಿ ಪಾಂಡವರು ಗೆಲ್ಲುವಂತಾಗಲಿ ಅದಕ್ಕಾಗಿ ನಿನ್ನ ಸಾರಥ್ಯವನ್ನು ನನ್ನ ಕೈಗೊಪ್ಪಿಸು

ಇದು ಕೃಷ್ಣನ ಸಂದೇಶ ಹಾಗೂ ವೇದಶಾಸ್ತ್ರಗಳ ಸಾರ ಸಂದೇಶ





ಪಲಮನೇರಿನಲ್ಲಿ ಈಚೆಗೆ ತಿ ತಿ ದೇ ಕಲ್ಯಾಣಮಂಟಪದ ಉದ್ಘಾಟನೆ ಆಯಿತು

ಚಿತ್ರದಲ್ಲಿ ಸ್ಥಳೀಯ ಎಂ.ಎಲ್.ಎ. ಹಾಗೂ ಮಂತ್ರಿ ಡಾ|| ಪಟ್ನಂ ಸುಬ್ಬಯ್ಯ ಅವರನ್ನು

ತಿ ತಿ ದೇ ಅಧ್ಯಕ್ಷ ಶ್ರೀ ಕೆ ವೆಂಕಟ್ರಾವು ಅವರನ್ನು ಕಾಣಬಹುದು

# ವಾರ್ತಾಲಹರಿ



ವಾಯಲ್ಪಾಡಿನಲ್ಲಿ ಆಲಯಾಭಿವೃದ್ಧಿ ಕಾರ್ಯಕ್ರಮಗಳನ್ನು ಈಚೆಗ ಆರಂಭಿಸಲಾಯಿತು ತತ್ಸಂಬಂಧಿ ಚಿತ್ರ



## ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವ



ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ವಾರ್ಷಿಕ ತೆಪ್ಪೋತ್ಸವಗಳು ಜೂನ್ 24 ರಿಂದ 28 ರ ವರೆಗೆ ಐದು ದಿನಗಳ ಕಾಲ ತಿರುಚಾನೂರು ಪದ್ಮಸರೋವರದಲ್ಲಿ ವೈಭವದಿಂದ ನಡೆದವು. ಮೊದಲನೆಯದಿನ 24 ರಂದು ಶ್ರೀಕೃಷ್ಣಸ್ವಾಮಿ ರುಕ್ಮಿಣಿಯರ ತೆಪ್ಪೋತ್ಸವ ನಡೆಯಿತು ಎರಡನೆಯದಿನ ಶ್ರೀ ಸುಂದರ ರಾಜಸ್ವಾಮಿ ಪತ್ನೀ ಸಮೇತರಾಗಿ ಪದ್ಮಸರೋವರದಲ್ಲಿ ತೆಪ್ಪೋತ್ಸವಗಳಲ್ಲಿ ಭಾಗವಹಿಸಿದರು ಮುಂದಿನ ಮೂರು ದಿನಗಳು ಎಂದರೆ ಪೂರ್ಣಿಮೆಯ ವರೆಗೆ ಅಮ್ಮನವರ ತೆಪ್ಪೋತ್ಸವಗಳು ನಡೆದವು. ನಿಜ ಜ್ಯೇಷ್ಠದ ಪೂರ್ಣಿಮೆಯಂದು ಬೆಳುದಿಂಗಳಿನಲ್ಲಿ ಪದ್ಮಾವತೀ ಅಮ್ಮನವರು ಪದ್ಮಸರೋವರದಲ್ಲಿ ವೇದನಾದ ಮಂಗಳ ವಾದ್ಯಗಳ ಸುಘೋಷಗಳ ನಡುವೆ ಪ್ಲವದಲ್ಲಿ ಬಂದಾಗ ಅಪಾರ ಸಂಖ್ಯೆಯ ಭಕ್ತಜನ ನೆರೆದು ಆನಂದ ತುಂದಿಲರಾದರು

ಈ ಬಾರಿಯ ತೆಪ್ಪೋತ್ಸವಗಳ ಕಾಲದಲ್ಲಿ ಎಂದಿನಂತೆ ಧರ್ಮಪ್ರಚಾರ ಪರಿಷತ್ ಕಾರ್ಯಕ್ರಮಗಳೇ ಅಲ್ಲದೆ ತಿರುಚಾನೂರು ಆಲಯದ ಬಳಿಯ ಶ್ರೀ ಪದ್ಮಾವತೀ ಅಮ್ಮನವರ ಆಸ್ಥಾನ ಮಂಟಪದಲ್ಲಿ ಚೆನ್ನೈ ಮಾತೃಕೇಂದ್ರದ ಶ್ರೀಮತಿ ಜನಾರ್ದನ್‌ರಾವ್ ಅವರ ಶ್ರೀ ವೆಂಕಟೇಶ್ವರ ಸುಪ್ರಭಾತ ದೃಶ್ಯ ಶ್ರವಣ ಕಾರ್ಯಕ್ರಮ ಹೆಚ್ಚಿನ ಭಕ್ತರನ್ನು ಆಕರ್ಷಿಸಿತು



## ವಿಶೇಷ ಪ್ರಾಧಿಕಾರದ ಪ್ರಮಾಣಸ್ವೀಕಾರ

ತಿ ತಿ ದೇ. ಧರ್ಮಕರ್ತರ ಮಂಡಳಿಯ ಕಾಲ ಪರಿಮಿತಿ ಆಗಸ್ಟ್ ತಿಂಗಳ ಏಳನೇ ತಾರೀಖಿಗೆ ಮುಗಿದದ್ದರಿಂದಾಗಿ ಹೊಸ ಧರ್ಮಕರ್ತರ ಮಂಡಳಿಯ ಏರ್ಪಾಡು ಆಗುವವರೆಗೆ ಅದರ ಸ್ಥಾನದಲ್ಲಿ ವಿಶೇಷ ಪ್ರಾಧಿಕಾರವನ್ನು ಘಟಿಸಲಾಗಿದೆ. ತಿ ತಿ ದೇ ಕಾಯಿದೆಯನ್ವಯ ಈ ಸ್ಪೆಸಿಫೈಡ್ ಅಥಾರಿಟಿಯಲ್ಲಿ - ವಿಶೇಷ ಪ್ರಾಧಿಕಾರ





## ಜೇಷ್ಠಾಭಿಷೇಕ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿನ ಉತ್ಸವ ಮೂರ್ತಿಗಳಿಗೆ ನಡೆಯುವ ವಾರ್ಷಿಕ ಜ್ಯೇಷ್ಠಾಭಿಷೇಕ (ಅಭಿದ್ಯೇಕ ಅಭಿಷೇಕ) ಈ ಬಾರಿ ಜೂನ್ 25 ರಿಂದ 27 ರ ವರೆಗೆ ಯಶಸ್ವಿಯಾಗಿ ನಡೆಯಿತು 25 ರಂದು ದೇಳಗ್ಗೆ ಸ್ವಾಮಿಗೆ ವಜ್ರಕವಚ ಸಮರ್ಪಣೆ ಆಯಿತು 26 ರಂದು ದೇಳಗ್ಗೆ ಮುತ್ತಿನ ಕವಚ ಸಮರ್ಪಣೆ ಆಗಿ 27 ರಂದು ಚಿನ್ನದ ಕವಚ ಸಮರ್ಪಣೆ ಆಯಿತು ಮೂರೂದಿನವೂ ಉತ್ಸವ ಮೂರ್ತಿಗಳ ಮೆರವಣಿಗೆಯಲ್ಲಿ ಸಾವಿರಾರು ಮಂದಿ ಭಕ್ತರು ಪಾಲುಗೊಂಡರು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬರಾವ್, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಮೊದಲಾದವರು ಭಾಗವಹಿಸಿದ್ದರು

ದಲ್ಲಿ - ಆಂಧ್ರಪ್ರದೇಶದ ಮುಜರಾಯಿ ಇಲಾಖೆಯ ಮುಖ್ಯಕಾರ್ಯದರ್ಶಿ ಜೆ ರಾಮಬಾಬು, ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಮಿಷನರ್ ಶ್ರೀ ಎಸ್ ಎಂ ಬಾಲಸುಬ್ರಹ್ಮಣ್ಯಂ ತಿ ತಿ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವ್ ಅವರುಗಳು ಸದಸ್ಯರುಗಳಾಗಿರುವರು ಮುಜರಾಯಿ ಇಲಾಖಾ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಈ ಸಮಿತಿ ಕೆಲಸ ಮಾಡುವುದು

ಈ ಮೂವರು ಸದಸ್ಯರ ವಿಶೇಷ ಪ್ರಾಧಿಕಾರ ಆಗಸ್ಟ್ 12 ರಂದು ತಿರುಮಲೆಯ ಆಲಯದ ಬಂಗಾರದ ಬಾಗಿಲ ಬಳಿ ಏರ್ಪಡಿಸಿದ ಪ್ರಮಾಣ ವಚನ ಸ್ವೀಕಾರ ಸಭೆಯಲ್ಲಿ ಸೇವೆ ಹಾಗೂ ರಹಸ್ಯ ರಕ್ಷಣೆಯ ಶಪಥವನ್ನು ಸ್ವೀಕರಿಸಿದರು ನಂತರ ಅವರಿಗೆ ರಂಗನಾಯಕ ಮಂಟಪದಲ್ಲಿ ವೇದಾಶೀರ್ವಚನವನ್ನು ನೀಡಲಾಯಿತು

ತಿ ತಿ ದೇವಸ್ಥಾನಗಳ ಹಿರಿಯ ಅಧಿಕಾರಿಗಳು, ಆಲಯ ಪುರೋಹಿತ ಪ್ರಧಾನ ಅರ್ಚಕರೂ ಈ ಪದವಿ ಸ್ವೀಕಾರ ಪ್ರಮಾಣ ವಚನ ಆಸ್ಥಾನದಲ್ಲಿ ಭಾಗವಹಿಸಿದ್ದರು

## ಸ್ವಾಮಿಗೆ ಬಂಗಾರದ ಲಕ್ಷ್ಮೀಹಾರ

ಜುಲೈ 15 ರಂದು ಅಜ್ಞಾತ ಭಕ್ತರೊಬ್ಬರು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಗೆ ಕಾಣಿಕೆಯಾಗಿ ಒಂದು ಕೆ ಜಿ ಬಂಗಾರದ ಲಕ್ಷ್ಮೀ ಕಾಸುಗಳ ಹಾರವನ್ನು ಹುಂಡಿಯಲ್ಲಿ ಹಾಕುವುದರ ಮೂಲಕ ಸಮರ್ಪಿಸಿದ್ದಾರೆ

ಅಂದು ಹುಂಡಿಯ ಕಾಣಿಕೆಗಳನ್ನು ಲೆಕ್ಕಿಸಲು ತೆಗೆದಾಗ ಈ ಹಾರವನ್ನು ಕಂಡುಕೊಳ್ಳಲಾಯಿತು ಎಂದು ಪರಕಾಮಣಿಯ ಅಧಿಕಾರಿಗಳು ತಿಳಿಸಿದ್ದು ಸ್ವಾಮಿಯ ಮೆರವಣಿಗೆಯಲ್ಲಿ ಅಲಂಕಾರವಾಗಿ ಬಳಸಲು ಪ್ರಯೋಜನವಾಗಬಹುದಾಗಿರುವಷ್ಟು ಪ್ರಶಸ್ತವಾಗಿದೆ ಎಂದು ಕೀರ್ತಿಸಲಾಗಿದೆ.

## ಕಾರ್ಗಿಲ್ ರಕ್ಷಣಾನಿಧಿಗೆ ಸಿಬ್ಬಂದಿ ಕಾಣಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ಸಿಬ್ಬಂದಿಯ ಮೂಲಕ ಕಾರ್ಗಿಲ್ ಸಮರ ಸಂತ್ರಸ್ತ ಪರಿಹಾರಕ್ಕೆಂದು ಸಂಗ್ರಹಿಸಲಾದ 1463471

ರೂಪಾಯಿಗಳ ಮೊತ್ತವನ್ನು ಸೈನ್ಯ ನಿಧಿಗೆ ಕಳುಹಿಸಲಾಗಿದೆ

ತತ್ಸಂಬಂಧಿ ವಾರ್ತೆಯನ್ನು ಪತ್ರಿಕೆಗಳಿಗಾಗಿ ತಿ ತಿ ದೇ ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್ ಗೌಡ್ ಅವರು ಬಿಡುಗಡೆ ಮಾಡಿದ್ದಾರೆ ಅದರಂತೆ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ. ಸುಬ್ಬಾರಾವು ಅವರ ನೇತೃತ್ವದಲ್ಲಿ ನಡೆದ ಧನ ಸಂಗ್ರಹ ಕಾರ್ಯದಲ್ಲಿನ ಮೊತ್ತವನ್ನು ಡೆಪ್ಯೂಟಿ ಡೈರೆಕ್ಟರ್, ಆರ್ಮಿ ವೆಲ್‌ಫೇರ್ ಫಂಡ್ ಎ ಜಿ. ಬ್ರಾಂಚ್, ಆರ್ಮಿ ಹೆಡ್ ಕ್ವಾರ್ಟರ್ಸ್ ವೆಸ್ಟ್‌ಬ್ಲಾಕ್, ಆರ್ ಕೆ ಪುರಂ, ಹೊಸದೆಹಲಿ ಇವರಿಗೆ ಕಳುಹಿಸಲಾಗಿದೆ

## ಉಚಿತ ನೇತ್ರ ಚಿಕಿತ್ಸಾ ಶಿಬಿರ

ಆಗಸ್ಟ್ 21, 22 ರಂದು ತಿ ತಿ ದೇವಸ್ಥಾನಗಳ ಎರಡನೇ ಸತ್ರದಲ್ಲಿ ತಿ ತಿ ದೇ ಕೇಂದ್ರ ಆಸ್ಪತ್ರೆಯವರು ಚಿತ್ತೂರಿನ ಅಂಧತ್ವ ನಿವಾರಣಾ ಸಂಘ ಹಾಗೂ ಹೈದರಾಬಾದಿನ ಸರೋಜಿನಿ ದೇವಿ ಕಣ್ಣಿನ ಆಸ್ಪತ್ರೆಯವರುಗಳ ನೆರವಿನಿಂದ ಯಶಸ್ವಿಯಾಗಿ 41 ನೆಯ ಉಚಿತ ನೇತ್ರ ಚಿಕಿತ್ಸಾ ಶಿಬಿರವನ್ನು ನಡೆಸಿದರು

ಆಗಸ್ಟ್ 21 ರಂದು ನೇತ್ರ ರೋಗ ತಪಾಸಣೆ ಮಾಡಲಾಗಿ, ಶಸ್ತ್ರ ಚಿಕಿತ್ಸೆಯ ರೋಗಿಗಳನ್ನು ಗುರುತಿಸಲಾಯಿತು 22 ರಂದು ಅವರುಗಳಿಗೆ ಸಕ್ಕರೆ ಖಾಯಿಲೆಗಳಂತಹ ಯಾವುದೇ ಶಸ್ತ್ರ ಚಿಕಿತ್ಸಾನಿರೋಧಿ ಖಾಯಿಲೆಗಳಿಲ್ಲವೆಂದು ಖಚಿತ ಪಡಿಸಿಕೊಂಡು ನೇತ್ರ ಶಸ್ತ್ರ ಚಿಕಿತ್ಸೆ ನಡೆಸಲಾಯಿತು

ರೋಗಿಗಳಿಗೆ ಅವರ ಅಟೆಂಡರ್‌ಗಳಿಗೆ ಉಚಿತ ತಪಾಸಣೆ, ಶಸ್ತ್ರಚಿಕಿತ್ಸೆ, ವಸತಿ, ಭೋಜನ ವ್ಯವಸ್ಥೆಗಳನ್ನು ತಿ ತಿ ದೇ ಗಳು ಮಾಡಿದ್ದು, ಶಸ್ತ್ರ ಚಿಕಿತ್ಸೆ ಆದವರಿಗೆ ಅವರು ಶಿಬಿರದಿಂದ ಹೊರ ಹೋಗುವಾಗ ಉಚಿತ ಸುಲೋಚನಗಳನ್ನು ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವ್ ಅವರು ನೀಡಿದರು

## ಸ್ವಾಮಿ ಪವಿತ್ರೋತ್ಸವ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದಲ್ಲಿ ವರ್ಷದುದ್ದಕ್ಕೆ ನಡೆಯುವ ಪೂಜಾ ಪದ್ಧತಿಗಳಲ್ಲಿ ಅನವಧಾನದಿಂದ ಉಂಟಾಗಬಹುದಾದ ಲೋಪದೋಷ ನಿವಾರಣಗಾಗಿ ಪ್ರತಿ ವರ್ಷವೂ ನಡೆಯುವ ಪವಿತ್ರೋತ್ಸವಗಳು ಈ ಬಾರಿ ಶ್ರಾವಣಮಾಸದಲ್ಲಿ ಆಗಸ್ಟ್ 22 ರಿಂದ 24 ರ ವರೆಗ ನಡೆದು ಯಶಸ್ವಿಯಾದವು



## ಎಲ್ಲೋರಾ ನಿಧನ



ಎಲ್ಲೋರಾ ಎಂದು ಆಂಧ್ರ ಸಾಹಿತ್ಯ ಲೋಕದಲ್ಲಿ ಚಿರಪರಿಚಿತರಾಗಿ ಪತ್ರಕರ್ತರಾಗಿ, ಜಾನಪದ ಸಂಶೋಧಕರಾಗಿ ಪ್ರಸಿದ್ಧರಾಗಿದ್ದ ಶ್ರೀ ಗೊಡವರ್ತಿ ಭಾಸ್ಕರರಾವ್ ಅವರು ತಮ್ಮ 72 ನೆಯ ವಯಸ್ಸಿನಲ್ಲಿ ಕಾಕಿನಾಡದಲ್ಲಿ ಅಲ್ಪಕಾಲದ ಅಸ್ವಸ್ಥತೆಯಿಂದ ಆಗಸ್ಟ್ 9 ರಂದು ಪರಮಪದವನ್ನೈದಿದರೆಂದು ತಿಳಿಸಲು ಸಪ್ತಗಿರಿ ವಿಷಾದಿಸುತ್ತದೆ

ಎಲ್ಲೋರಾ ಎಂಬ ಕಾವ್ಯನಾಮದಿಂದ ಆಗಾಗ ಕವಿತಾವಲ್ಲರಿಯನ್ನೂ ಹಬ್ಬಿಸುತ್ತಿದ್ದ ಭಾಸ್ಕರರಾಯರು 1927 ರಲ್ಲಿ ಹುಟ್ಟಿ ಆಂಧ್ರಪ್ರಭ ಪತ್ರಿಕೆಯಲ್ಲಿ ಹೆಚ್ಚುಕಾಲ ದುಡಿದರು ಈ ಕಾಲದಲ್ಲಿಯೇ ಜಾನಪದ ಸಾಹಿತ್ಯದಲ್ಲಿ ಸಂಶೋಧನೆ ಸಂಗ್ರಹಕಾರ್ಯಗಳನ್ನು ನಡೆಸಿ ತಲುಗು ಜಾನಪದ ಸಾಹಿತ್ಯದ ಹದ್ಮೊತ್ತಿಗೆಗಳನ್ನು ಪ್ರಕಟಿಸಿದರು ಅವರು ನಿವೃತ್ತರಾದ ನಂತರ ತಿ ತಿ ದೇವಸ್ಥಾನಗಳ ಪ್ರಕಟನ ವಿಭಾಗದಲ್ಲಿ ಸಂಪಾದಕರಾಗಿ ಮೂರು ವರ್ಷ ಕಲಸ ನಿರ್ವಹಿಸಿದರು ಈ ಕಾಲದಲ್ಲಿ ಸಪ್ತಗಿರಿ ತಲುಗು ಪತ್ರಿಕೆಯಲ್ಲಿ ವಾಚಕರಿಗೆ ಉಂಟಾಗುವ ಸಾಮಯಿಕ ಸಂದೇಹಗಳಿಗೆ ಸಮಾಧಾನವನ್ನು ನೀಡುವ ಸಂದೇಹಾಲು - ಸಮಾಧಾನಾಲು ಶೀರ್ಷಿಕೆಯನ್ನು ನಡಸಿಕೊಟ್ಟರು

ಒಬ್ಬ ಮಗಳು ಒಬ್ಬ ಮಗ ಹಾಗೂ ಪತ್ನಿಯನ್ನು ಅಗಲಿ ಹೋಗಿರುವ ಶ್ರೀಯುತರು ಅಪಾರವಾದ ಅಭಿಮಾನಿಗಳನ್ನೂ ಹೊಂದಿದ್ದರು ಗೊಡವರ್ತಿ ಭಾಸ್ಕರರಾಯರ ಪ್ರಸ್ಫುಟವಾದ ಅಭಿವ್ಯಕ್ತಿ ವಿಧಾನವನ್ನು ನೆನಯುತ್ತ ಅವರ ನೆನಪಿನಲ್ಲಿ ನಮಿಸುತ್ತದ ಸಪ್ತಗಿರಿ -

## ಡಾ|| ಸಿ. ಅನ್ನಾರಾವ್ ನಿಧನ



ತಿರುಮಲೆ ತಿರುಪತಿ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿಯಾಗಿ, ಧರ್ಮ ಕರ್ತರ ಮಂಡಳಿಯ ಅಧ್ಯಕ್ಷರಾಗಿ ಹೆಸರಾಂತ ಡಾ|| ಚೆಲಿಕಾನಿ ಅನ್ನಾರಾಯರು ತಿರುಪತಿಯಲ್ಲಿ ಅಲ್ಪಕಾಲದ ಅಸ್ವಸ್ಥತೆಯಿಂದ ಶ್ರೀ ವೆಂಕಟೇಶ್ವರ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯಲ್ಲಿ ಆಗಸ್ಟ್ 20 ರಂದು ಶುಕ್ರವಾರ ಬೆಳಗಿನ ಜಾವದಲ್ಲಿ ಶ್ರೀನಿವಾಸನಲ್ಲಿ ಲೀನವಾದರು ಎಂದು ತಿಳಿಸಲು ಸಪ್ತಗಿರಿ ವಿಷಾದಿಸುತ್ತದೆ

1908 ರ ಸೆಪ್ಟಂಬರ್ 8 ರಂದು ಹುಟ್ಟಿದ ಅನ್ನಾರಾಯರು ಬೊಬ್ಬಿಲಿ ರಾಜರ ಸೋದರಳಿಯಂದಿರು ಪಾರ್ಥಸಾರಥಿ ರಾಯನಿಂಗರ್ ಅವರ ಪುತ್ರಿ ಶ್ರೀಮತಿ ಅನಸೂಯಾದೇವಿ ಅವರನ್ನು ವಿವಾಹವಾಗಿ ನಂತರ ತಿರುಮಲೆ ತಿರುಪತಿ ದೇವಸ್ಥಾನಗಳಲ್ಲಿ ಉದ್ಯೋಗಕ್ಕೆ ಸೇರಿದರು ತಮ್ಮ ಅಪಾರವಾದ ಪ್ರತಿಭಾಪಾಟವದಿಂದಲೂ ಭಕ್ತಿಪ್ರಪತ್ತಿಗಳಿಂದಲೂ ತಿರುಮಲೆಯ ಸ್ವಾಮಿಯ ಸೇವೆಯಲ್ಲಿ ಸದಾ ನಿರತರಾಗಿ, ಭಾಗವತಸೇವೆ ಮಾಡುತ್ತ ಧನ್ಯಜೀವಿಗಳಾದ ಅವರಿಗೆ ಸಾರ್ವಜಿಕವಾಗಿಯೂ ಸೇವೆಯನ್ನು ಸಲ್ಲಿಸುವ ಅಕುಂಠಿತ ದೀಕ್ಷೆ, ಹಾಗಾಗಿಯೇ ಅವರು ಆಲಯವನ್ನು ನೋಡಿಕೊಳ್ಳುತ್ತ ಅದರ ಪೂಜಾ ವ್ಯವಸ್ಥೆಯನ್ನು ಸುಭದ್ರ ಗೊಳಿಸಿ ಬಂದ ಆದಾಯವನ್ನು ಭಕ್ತಯಾತ್ರಿಕರ ಸೌಲಭ್ಯಗಳ ಅಭಿವೃದ್ಧಿಯಲ್ಲಿ ಬಳಸಿ, ಹೆಚ್ಚುವರಿಯನ್ನು ಶಿಕ್ಷಣ, ಧರ್ಮಪ್ರಸಾರದಲ್ಲಿ ಸಾರ್ವಜನಿಕ ಆರೋಗ್ಯದಲ್ಲಿ ತೊಡಗಿಸಿ ಸರ್ವಮಾನ್ಯರಾದರು.ತಿರುಪತಿ, ತಿರುಮಲೆಗಳ ಆಲಯಗಳೇ ಅಲ್ಲದೆ ಭಾರತಾದ್ಯಂತ ಹರಡಿದ ಇತರ ಆಲಯಗಳ ಅಭಿವೃದ್ಧಿಯಲ್ಲಿಯೂ ಸಲಹೆ ಸೂಚನೆಗಳನ್ನು ನೀಡುವಷ್ಟು ಎತ್ತರಕ್ಕೆ ಏರಿದರು

ಉದ್ಯೋಗರೀತ್ಯಾ ಸೇವಾ ನಿವೃತ್ತರಾದರೂ ಅವರ ಸೇವಾಸಕ್ತಿ ಅದಮ್ಯ ಆಗಿದ್ದು, ಇತರತ್ರ ತಮ್ಮನ್ನು ತಾವು ಸಮಾಜದಲ್ಲಿ ತೊಡಗಿಸಿಕೊಂಡು ಸಾರ್ಥಕವಾಗಿ ಬದುಕಿದ ಅವರಿಗೆ ಭಾರತದ ರಾಷ್ಟ್ರಪತಿ ಗ್ಯಾನಿ ಜೈಲ್‌ಸಿಂಗರಿಂದಲೂ, ತೆಲುಗು ಅಕಾಡಮಿಗಳಿಂದಲೂ ಸತ್ಕರಿಸಲ್ಪಟ್ಟರು ಅವರಿಗೆ ಭಾರತ ಶಿರೋಮಣಿ ಬಿರುದನ್ನು ಭಾರತದ ಉಪರಾಷ್ಟ್ರಪತಿ ಬಿ ಡಿ ಜತ್ತಿಯವರು ನೀಡಿದ್ದರು

ಸರ್ವತ್ರ ಹೊಗಳಿಕೆಗೆ ಪಾತ್ರರಾಗಿದ್ದ ಅನ್ನಾರಾಯರ ನೆನಪಿನಲ್ಲಿ ಸಪ್ತಗಿರಿ ಗೌರವಾದರಗಳಿಂದ ನಮಿಸುತ್ತದೆ

# ಸಪ್ತಗಿರಿ

## ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು

೧) ಲೇಖನಗಳು ಆರು ಪುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ

೩) ಚಿತ್ರಗಳನ್ನು ಇಂಡಿಯನ್ ಇಂಕ ನಲ್ಲೇ ಬರೆಯಬೇಕು

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿವಿವರಗಳೊಂದಿಗೆ ಕಳುಹಿಸಬೇಕು

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು

ಮಿಕ್ಕ ವಿವರಗಳಿಗೆ

**ಸಂಪಾದಕರು,**

ಸಪ್ತಗಿರಿ,

ತಿ ತಿ ದೇವಸ್ಥಾನಗಳು, ತಿರುಪತಿ - 517 507

ಚಿತ್ತೂರು ಜಿಲ್ಲೆ, ಆಂ.ಪ್ರ.

Edited and Published on behalf of TT Devasthanams by Dr N S Rama Murthy, M A and Printed at TTD Press by M Lakshmana Rao, M A, L P T, Manager, TTD Press, Tirupati - 517 507

# ತಿರುಮಲೆಯಲ್ಲಿನ ಸೌಕರ್ಯಗಳು



## ಕಾಲುಹಾದಿಯಲ್ಲಿ ಬೆಟ್ಟವನ್ನೇರುವವರಿಗೆ ಇರುವ ಸೌಕರ್ಯಗಳು

ಅಸಂಖ್ಯಾತ ಯಾತ್ರಿಕರು ತಮ್ಮ ಹರಕೆಯ ಭಾಗವಾಗಿ ತಿರುಮಲೆಯನ್ನು ಕಾಲುಹಾದಿಯ ಮೂಲಕ ಏರಿ ತಲುಪುತ್ತಾರೆ ಅವರ ಅನುಕೂಲಕ್ಕಾಗಿ ತಿ ತಿ ದೇ ಈ ಕೆಳಕಂಡ ಸೌಕರ್ಯಗಳನ್ನುಂಟಾಗಿಸಿವೆ

* ಬೆಟ್ಟವನ್ನು ಹತ್ತುವ ಯಾತ್ರಿಕರಿಗಾಗಿ ತಿರುಪತಿಯ ರೈಲ್ವೆ ನಿಲ್ದಾಣದಿಂದ ಕೇಂದ್ರ ಬಸ್ ನಿಲ್ದಾಣ ಕಪಿಲತೀರ್ಥಗಳ ಮೂಲಕ ಹಾದು ಅಲಿಪಿರಿಯನ್ನು ತಲುಪುವಂತೆ ಎರಡು ಬಸ್‌ಗಳನ್ನು ಉಚಿತವಾಗಿ ಹೊರಡಿಸಲಾಗುತ್ತಿವೆ ಈ ಉಚಿತ ಪ್ರಯಾಣದ ಬಸ್‌ಗಳು ಬೆಳಗ್ಗೆ 4-00 ಗಂಟೆಯಿಂದ ರಾತ್ರಿ 11-00 ಗಂಟೆಯವರೆಗೆ ಅರವತ್ತು ಬಾರಿ ನಡೆಯುತ್ತವೆ
* ತಿರುಪತಿಯ ಸತ್ರಗಳಿಂದ / ಅಲಿಪಿರಿಯಿಂದ ತಿರುಮಲೆಗೆ ಯಾತ್ರಿಕರ ಸಾಮಾನುಗಳನ್ನು ಪಟ್ಟಿಕ್ಕೆ ಉಚಿತವಾಗಿ ಸಾಗಿಸಲಾಗುವುದು
* ಗಾಳಿಗೋಪುರ, ಬೆಟ್ಟಿಯೆಕ್ಕುಡು, ಮಾಮಂಡೂರು ಮೆಟ್ಟು, ನರಸಿಂಹಸ್ವಾಮಿ ಗುಡಿ, ಮೊಣಕಾಲು ಮುರಿ ಮೊದಲಾದೆಡೆಗಳಲ್ಲಿ ಅಡಿಗೆ ಮಾಡಿಕೊಳ್ಳುವ ಏರ್ಪಾಡು
* ಕಾಲುಹಾದಿಯುದ್ದಕ್ಕೂ ಕುಡಿಯುವ ನೀರಿನ ಸೌಲಭ್ಯವಿದೆ
* ಕಾಲುಹಾದಿಯಲ್ಲಿ ಶೌಚಗೃಹಗಳೂ ಉಂಟು
* ಮುಖ್ಯವಾದ ಆಯಕಟ್ಟಿನ ಸ್ಥಳಗಳಲ್ಲಿ ವಿಶ್ರಾಂತಿ ಪಡೆಯಲು ನೆರಳಿನ ವ್ಯವಸ್ಥೆ
* ವಂಚಕರು, ಮೋಸಗಾರರ ಪಾಲಿಗೆ ಸಿಕ್ಕಿ ಯಾತ್ರಿಕರು ವಂಚಿತರಾಗದಂತೆ ನೋಡಿಕೊಳ್ಳಲು ಹಗಲು ರಾತ್ರಿ ಸಂರಕ್ಷಕ ಭಟರ, ಗೂರ್ಖಾಗಳ, ಪೋಲೀಸರ ಕಾವಲು ಪಹರೆ
* ಸ್ಥಳೀಯ ಪ್ರಸಾರ ಪದ್ಧತಿಯಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರ

## ಸರದಿಯ ಸಾಲಿನಲ್ಲಿ ಯಾತ್ರಿಕರ ಸೌಲಭ್ಯಗಳು :

ಸರದಿಯ ಸಾಲಿನ ಕೋಣೆಗಳಲ್ಲಿ ಸ್ವಾಮಿಯ ದರ್ಶನಕ್ಕೆಂದು ಯಾತ್ರಿಕರು ಕಾಯುವ ಸಮಯವನ್ನು ಕಡಿಮೆ ಮಾಡುವಂತಹ ಅನೇಕ ಹೊಸಹೊಸ ಕ್ರಮಗಳನ್ನು ತಿ ತಿ ದೇವಸ್ಥಾನಗಳು ಆಲಯದ ದೈನಂದಿನ ಸೇವೆಗಳಲ್ಲಿ ಪ್ರವೇಶಗೊಳಿಸಿವೆ ಜೊತೆಗೆ ಕಾಯುವ ಕೋಣೆಗಳಲ್ಲಿ ಯಾತ್ರಿಕರಿಗೆ ಬೇಸರವಾಗದಂತೆ ಅವರ ಮನಸ್ಸಿಗೆ ಉಲ್ಲಾಸವಾಗುವಂತೆ ಈ ಕೆಲವು ಕ್ರಮಗಳನ್ನೂ ಕೈಗೊಳ್ಳಲಾಗಿದೆ

* ಗಾಳಿ ಬೆಳಕುಗಳ ವಿಶಾಲವಾದ ಆರೋಗ್ಯಕರವಾದ ವಿದ್ಯುತ್ ಪಂಖಗಳಿಂದ ಕೂಡಿದ ಕಾಯುವ ಕೋಣೆಗಳು
* ತಿ ತಿ ದೇ ಕ್ಯಾಂಟೀನಿನಿಂದ ಒಳಗಡೆ ಅಲ್ಪೋಪಹಾರ ಸೌಲಭ್ಯ
* ಆಹಾರದ ಪೊಟ್ಟಣಗಳು ಸರಸವಾದ ದರಗಳಲ್ಲಿ ಸಿಗುವ ಏರ್ಪಾಡು
* ಆಂಧ್ರಪ್ರದೇಶ ಡೈರಿ ಅಭಿವೃದ್ಧಿ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ
* ಪ್ರಥಮ ಚಿಕಿತ್ಸೆ
* ಸರದಿಯ ಸಾಲಿನ ಕೋಣೆಗಳಲ್ಲಿ ಶೌಚಗೃಹ ವ್ಯವಸ್ಥೆ
* ಕ್ಲೋಸ್ಡ್ ಸರ್ಕ್ಯೂಟ್ ಟಿ ವಿ ಕಾರ್ಯಕ್ರಮಗಳು
* ಭಕ್ತಿ ಸಂಗೀತ, ಹರಿಕಥೆ ಮೊದಲಾದವುಗಳ ಪ್ರಸಾರ
* ವೈಕುಂಠಂ ಕ್ಯೂಕಾಂಪ್ಲೆಕ್ಸ್ ಸಮೀಪದಲ್ಲಿ ಯಾತ್ರಿಕರು ತಮ್ಮ ವಸ್ತುಗಳನ್ನು ಸುರಕ್ಷಿತಗೊಳಿಸಬಹುದು ಸರದಿಯ ಸಾಲಿನಲ್ಲಿ ನಡೆಯುತ್ತ ಸರಂಜಾಮುಗಳನ್ನು ಹೊತ್ತು ನಡೆಯಬೇಕಾಗಿಲ್ಲ
* ಸರದಿಯ ಸಾಲಿಗೆ ಸೇರುವ ಸ್ಥಳಗಳಲ್ಲಿ ಪಾದರಕ್ಷೆಗಳನ್ನು ಭದ್ರಪಡಿಸುವ ಸೌಲಭ್ಯವಿದೆ
* ವಂಚಕ ದಳ್ಳಾಳಿಗಳಿಂದ ಉದ್ಯೋಗಿಗಳ ಭ್ರಷ್ಟತೆಯನ್ನು ನಿವಾರಿಸಲು ಆಲಯದ ಮಹಾದ್ವಾರದಲ್ಲಿ ಒಬ್ಬ ಅಧಿಕಾರಿಯ ನೇಮಕ ಇವರು ದೂರುಗಳನ್ನೂ ವಿಚಾರಿಸುವರು
* ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಲ್ಲಿ ಯಾತ್ರಿಕರ ಅನುಕೂಲಗಳನ್ನು ನೋಡಿಕೊಳ್ಳಲು ಒಬ್ಬ ಅಧಿಕಾರಿಯ ನೇಮಕ

## ಇತರ ಸೌಲಭ್ಯಗಳು :

* ತಿರುಪತಿಯ ತಿರುಚಾನೂರು ರಸ್ತೆಯಲ್ಲಿನ ಶ್ರೀನಿವಾಸ ಕಲ್ಯಾಣ ಮಂಟಪಗಳಲ್ಲಿ ನಾಲ್ಕು ಮದುವೆಯ ಮಂಟಪಗಳಿದ್ದು ಇಲ್ಲಿ ಗ್ಯಾಸ್ ಒಲೆ ಮೊದಲಾದ ಆಧುನಿಕ ಸೌಲಭ್ಯಗಳುಂಟು ಸರಸವಾದ ಸೇವಾಶುಲ್ಕದ ಈ ಕಲ್ಯಾಣಮಂಟಪಗಳ ಬಾಡಿಗೆಯ ಕಾಲವ್ಯವಧಿ ಮಧ್ಯಾಹ್ನ 3 ರಿಂದ ಮಧ್ಯಾಹ್ನ 3 ಗಂಟೆ ಶ್ರೀನಿವಾಸಕಲ್ಯಾಣ ಮಂಟಪದ ಎದುರು ಶ್ರೀ ಪದ್ಮಾವತೀ ಕಲ್ಯಾಣಮಂಟಪಗಳ ಸಮುದಾಯದಲ್ಲಿ ಹೆಚ್ಚು ಕಲ್ಯಾಣ ಮಂಟಪಗಳುಂಟು

ಎಸ್.ವಿ ಅತಿಥಿಗೃಹ ಕ್ಯಾಂಟೀನ್ ತಿರುಮಲೆಯ ಎಸ್ ವಿ ಅತಿಥಿಗೃಹದ ಕ್ಯಾಂಟೀನ್‌ನಲ್ಲಿ ಸರಸದರಗಳಲ್ಲಿ ಆರೋಗ್ಯಕರವಾದ ಸಂತುಲಿತ ಊಟ ಉಪಹಾರಗಳು ದೊರೆಯುತ್ತವೆ

ಉಚಿತ ಭೋಜನ ಸ್ವಾಮಿಯನ್ನು ದರ್ಶಿಸಿ ಹೊರಬರುವಾಗ ಆಲಯದಲ್ಲಿ ನೀಡಲಾಗುವ ಉಚಿತ ಭೋಜನ ಚೀಟಿಗಳ ವಿತರಣೆಯ ಮೂಲಕ ತಿರುಮಲೆಯ ತಿ ತಿ ದೇ ಕ್ಯಾಂಟೀನ್‌ನಲ್ಲಿ ಬೆಳಗ್ಗೆ 10-00 ಗಂಟೆಯಿಂದ ರಾತ್ರಿ 1-00 ಗಂಟೆಯವರೆಗೆ ಉಚಿತವಾಗಿ ಸಂತುಲಿತ ಭೋಜನ ನೀಡಲಾಗುತ್ತದೆ

ಉಚಿತ ವೈದ್ಯಕೀಯ ಚಿಕಿತ್ಸೆ ಶೇಷಾದ್ರಿನಗರದ ಬಳಿಯ ಅಶ್ವಿನಿ ಆಸ್ಪತ್ರೆಯಲ್ಲಿ ಯಾತ್ರಿಕರಿಗೆ ಉಚಿತವಾಗಿ ವೈದ್ಯ ಸೌಲಭ್ಯ ದೊರೆಯುತ್ತದೆ

ಅಂಚೆ ಮತ್ತು ತಂತಿ ಕೇಂದ್ರ ಸ್ವಾಗತಕಚೇರಿಯ ಬಳಿ ಅಂಚೆ ಕಚೇರಿ, ತಂತಿ ಕಚೇರಿಗಳಿವೆ

ಉಚಿತ ಬಸ್ ತಿರುಮಲೆಯಲ್ಲಿ ಕಾಟೇಜುಗಳು, ಸತ್ರಗಳು, ಆಲಯ ಮೊದಲಾದವನ್ನು ಮುಟ್ಟುವಂತೆ ಉಚಿತ ಬಸ್‌ಗಳ ಓಡಾಡುತ್ತವೆ

ಏರ್‌ಲೈನ್ಸ್ ಕೋಚು ತಿರುಪತಿಯ ಬಳಿಯ ವಿಮಾನ ನಿಲ್ದಾಣದಿಂದ ತಿರುಮಲೆಗೆ ಹಾಗೂ ಹಿಂದಕ್ಕೆ ವಿಮಾನಯಾತ್ರಿಕರ ಅನುಕೂಲಕ್ಕಾಗಿ ಎ ಪಿ ಎಸ್ ಆರ್ ಟಿ ಸಿ ಯವರು ಲಕ್ಸುರಿ ಕೋಚನ್ನು ನಡೆಸುತ್ತಾರೆ

ಚಿನ್ನ ಹಾಗೂ ಬೆಳ್ಳಿ ಪದಕಗಳ ಮಾರಾಟ ತಿರುಮಲೆಯ ಆಲಯದ ಒಳಗಡೆ ಸ್ವಾಮಿಯ ಹುಂಡಿಯ ಎದುರು ಭಾಗದಲ್ಲಿ, ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಚಿತ್ರಗಳಿರುವ ಚಿನ್ನ ಹಾಗೂ ಬೆಳ್ಳಿಯ ಪದಕಗಳನ್ನು ಕೊಂಡುಕೊಳ್ಳಬಹುದು

ಕಲ್ಯಾಣಕಟ್ಟೆ ತಿರುಮಲೆಯ ಕಲ್ಯಾಣಕಟ್ಟೆಯಲ್ಲಿ ಯಾತ್ರಿಕರು ತಮ್ಮ ಹರಕೆಯ ಕೂದಲನ್ನು ಉಚಿತವಾಗಿ ನೀಡಬಹುದು ಕಾಟೇಜುಗಳ ಬಳಿಯಲ್ಲಿ ಇದಕ್ಕೆ 10 ರೂಪಾಯಿ ಶುಲ್ಕ

ಪ್ರಕಟಣೆಗಳ ಮಾರಾಟ ತಿರುಮಲೆಯ ಆರ್ ಟಿ ಸಿ ಬಸ್ ನಿಲ್ದಾಣದಲ್ಲಿ ಹಾಗೂ ತಿರುಪತಿಯಲ್ಲಿನ ಮೊದಲಸತ್ರ, ಶ್ರೀ ಗೋವಿಂದರಾಜಸ್ವಾಮಿ ಗುಡಿಯ ಬಳಿಯ ಧ್ಯಾನಮಂದಿರ, ರೈಲ್ವೆ ನಿಲ್ದಾಣಗಳಲ್ಲಿ ತಿ ತಿ ದೇವಸ್ಥಾನಗಳು ಪ್ರಕಟಿಸುವ ಎಲ್ಲ ಗ್ರಂಥಗಳು, ಧ್ವನಿಸುರುಳಿಗಳು, ದೊರೆಯುತ್ತವೆ

ರೈಲ್ವೆ ಮುಂಗಡ ಕಾಯ್ದಿರಿಸುವಿಕೆ ತಿರುಮಲೆಯ ಕೇಂದ್ರ ಸ್ವಾಗತ ಕಚೇರಿಯಲ್ಲಿರುವ ರೈಲ್ವೆ ಕೌಂಟರಿನಲ್ಲಿ ಬಸ್ - ರೈಲು ಪ್ರಯಾಣಗಳನ್ನು ಮುಂಗಡ ಕಾಯ್ದಿರಿಸಬಹುದು

ವಾಹನ ದುರಸ್ತಿ ತಿರುಮಲೆಯ ಹಾದಿಯಲ್ಲಿ ಕೆಟ್ಟು ನಿಲ್ಲುವ ವಾಹನಗಳ ದುರಸ್ತಿಗಾಗಿ ಒಂದು ದುರಸ್ತಿ ವಾಹನವು ಮೆಕ್ಯಾನಿಕ್ ಹಾಗೂ ಉಪಕರಣಗಳೊಂದಿಗೆ ಸಿದ್ಧವಾಗಿರುತ್ತದೆ ತಿರುಪತಿಯ ಅಲಿಪಿರಿ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿ ವಿಚಾರಿಸಿ ಈ ಸೌಲಭ್ಯ ಪಡೆಯಬಹುದು

ಪುರೋಹಿತ ಸಂಘ ತಿರುಮಲೆಯಲ್ಲಿ ವೈದಿಕ ಕ್ರಿಯೆಗಳನ್ನು ಯಾತ್ರಿಕರು ನಡೆಸಲು ಸುಲಭವಾಗುವಂತೆ, ಈ ಕಲಸಗಳನ್ನು ನಿರ್ವಹಿಸಬಲ್ಲ ಪಾಂಡಿತ್ಯ ಅನುಭವಗಳನ್ನುಳ್ಳ ಪುರೋಹಿತರ ಸಂಘವನ್ನು ತಿ ತಿ ದೇ ಸಂಘಟಿಸಿದೆ ಸದರಿ ಕ್ರಿಯೆಗಳ ಶುಲ್ಕವನ್ನೂ ತಿ ತಿ ದೇ ನಿರ್ಧರಿಸಿ ಪ್ರಕಟಿಸಿದೆ ಸಂಕಲ್ಪ, ನಾಮಕರಣ, ಚೌಲ, ಉಪನಯನ, ವಿವಾಹ, ಪಿಂಡಪ್ರದಾನ ಮೊದಲಾದ ವೈದಿಕ ಕ್ರಿಯೆಗಳನ್ನು ಮಾಡಬಯಸುವವರು ಪುರೋಹಿತ ಸಂಘದಲ್ಲಿ ವಿಚಾರಿಸಬಹುದು ತಿ ತಿ ದೇ ವಿಚಾರಣಾಕೇಂದ್ರದಲ್ಲಿ ವಿಚಾರಿಸಬಹುದು

